ಶಿಕ್ಷಣತಜ್ಞ ವಿಶ್ವವಿಖ್ಯಾತ ತತ್ವಜ್ಞಾನಿ

# ಡಾ. ಸರ್ವಪಲ್ಲಿ ರಾಧಾಕೃಷ್ಣನ್‌ರು





• ಪ್ರೊ. ಸಿದ್ದಣ್ಣ ಲಂಗೋಟಿ

ಜಗಜ್ಯೋತಿ ಬಸವೇಶ್ವರ ಅನುಭಾವಪೀಠ, ರಾಮದುರ್ಗ

ಡಾ. ಎಸ್. ರಾಧಾಕೃಷ್ಣನ್‌ರ ಜನ್ಮಶತಮಾನೋತ್ಸವ (೧೮೮೮-೧೯೮೮)
ಸಂಸ್ಮರಣೆ

ಶಿಕ್ಷಣತಜ್ಞ
ವಿಶ್ವವಿಖ್ಯಾತ ತತ್ವಜ್ಞಾನಿ

# ಡಾ. ಸರ್ವಪಲ್ಲಿ ರಾಧಾಕೃಷ್ಣನ್‌ರು

ಜೀವನ-ಸಾಧನೆ-ವಿಚಾರಗಳು

ಲೇಖಕರು:

**ಪ್ರೊ. ಸಿದ್ದಣ್ಣ ಲಂಗೋಟಿ (ಚಾಂದಕವಠೆ)**
ಎಂ. ಎ. (ತತ್ವಜ್ಞಾನ) ಎಲ್‌ಎಲ್.ಬಿ (ಸ್ಪೇಶಲ್)
ಎಂ.ಎ. (ಹಿಂದಿ) ಎಂ.ಎ.(ಕನ್ನಡ)ಪಿ.ವಾಯ್.ಇಡಿ.(ಯೋಗ)
ಗೌ|| ಸಂಪಾದಕರು, ಬಸವ ಬೆಳಗು, ರಾಮದುರ್ಗ ಜಿ.ಬೆಳಗಾವಿ

*

೨೦೧೪
ಜಗಜ್ಯೋತಿ ಬಸವೇಶ್ವರ ಅನುಭಾವ ಪೀಠ
ಬಸವಬೆಳಗು, ಮಹಾಂತೇಶ ನಗರ
ರಾಮದುರ್ಗ - ೫೯೧ ೧೨೩, ಜಿ. ಬೆಳಗಾವಿ

Vishwavikhyata Tattvajnani Shikshana Tajna,
**DR. S. RADHAKRISHNAN :** Life-Achievements-Thoughts

A Research book in Kannada written by :
**Prof. Siddanna Langoti**
M.A. (Philosophy),LL.B.(Special)
M.A. (Hindi), M.A. (Kannada) C.Y.Ed.(Yoga)
Hon. Editor & Writer, BasavaBelagu. Ramadurag-591123
Dist. Belgaum, Karnataka State

*Published by :*
Jagajyoti Basaveshwara Anubhava Peetha
Ramadurg - 591 123, Dist. Belgaum]

*Printed by :*
Rajashri Printing Press, Dharwad Ph: (0836) 2442918, 9880353875

*First Impression :* September 5, 1988
(Birth Centenary of Dr. S. Radhakrishnan 1888-1988)

*Second Impression :* September 5, 1990

*Third Impression :* September 5, 1998

*Fourth Impression :* September 5, 2007

*Fifth Impression :* September 5, 2014 Pages - 96+viii

**Price : Rs. 50-00 (Fifty Rupees only)**
Paper used - 70 GSM-Maplitho

ವಿಶ್ವವಿಖ್ಯಾತ ತತ್ವಜ್ಞಾನಿ

**ಡಾ. ಎಸ್. ರಾಧಾಕೃಷ್ಣನ್‌ರು**

**ಪ್ರೊ. ಸಿದ್ಧಣ್ಣ ಲಂಗೋಟಿ (ಚಾಂದಕವಠೆ)**

ಗೌರವ ಸಂಪಾದಕರು, ಬಸವಬೆಳಗು, ರಾಮದುರ್ಗ - ೫೯೧ ೧೨೩

***ಪ್ರಕಾಶಕರು :***

ಜಗಜ್ಯೋತಿ ಬಸವೇಶ್ವರ ಅನುಭಾವಪೀಠ, ರಾಮದುರ್ಗ - ೫೯೧ ೧೨೩.

ಪ್ರಥಮ ಮುದ್ರಣ : ಸಪ್ಟೆಂಬರ್ ೫, ೧೯೮೮

ಐದನೇಯ ಮುದ್ರಣ ; ಸಪ್ಟೆಂಬರ್ ೫, ೨೦೧೪

***ಬೆಲೆ :* ರೂ. ೫೦-೦೦ (ಐವತ್ತೂ ರೂಪಾಯಿಗಳು)**

***ಮುದ್ರಕರು :* ಶ್ರೀಮತಿ ಎಸ್.ವ್ಹಿ.ತಡಕೋಡ**
ರಾಜಶ್ರೀ ಪ್ರಿಂಟಿಂಗ್ ಪ್ರೆಸ್, ತಡಕೋಡ ಗಲ್ಲಿ, ಧಾರವಾಡ
೯೭೪೧೨೭೦೩೮೫

## ಡಾ. ಸರ್ವಪಲ್ಲಿ ರಾಧಾಕೃಷ್ಣನ್‌ರ
## ಅಧ್ಯಾತ್ಮ ಬಾಳಿನ ಗೌರವಾನ್ವಿತ ಚೇತನಗಳು



ಧರ್ಮಜ್ಯೋತಿ ಸ್ವಾಮಿ ವಿವೇಕಾನಂದರು (೧೮೬೩-೧೯೦೨)



ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿ
(೧೮೬೯-೧೯೪೮)



ವಿಶ್ವಕವಿ ರವೀಂದ್ರನಾಥ ಠಾಕೂರ
(೧೮೬೧-೧೯೪೧)

ವಿಶ್ವವಿಭೂತಿಗಳ ಪವಿತ್ರ ಚೇತನಕ್ಕೆ ಗೌರವಪೂರ್ವಕ ಈ ಕೃತಿಯನ್ನು ಅರ್ಪಿಸಲಾಗಿದೆ.

- ಸಿದ್ಧಣ್ಣ ಲಂಗೋಟಿ

## ೧. ವಿಶ್ವಗುರು ಜಗಜ್ಯೋತಿ ಬಸವೇಶ್ವರರ ಸಂದೇಶ :

'ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ,
ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ,
ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ,
ಇದೇ ಅಂತರಂಗಶುದ್ಧಿ, ಇದೇ ಬಹಿರಂಗಶುದ್ಧಿ,
ಇದೇ ನಮ್ಮ ಕೂಡಲಸಂಗಮದೇವರನೊಲಿಸುವ ಪರಿ'

'ಜ್ಞಾನದ ಬಲದಿಂದ ಅಜ್ಞಾನದ ಕೇಡ ನೋಡಯ್ಯಾ
ಜ್ಯೋತಿಯ ಬಲದಿಂದ ತಮಂಧದ ಕೇಡ ನೋಡಯ್ಯ'.
'ಸಕಲ ಜೀವಾತ್ಮರಿಗೆ ಲೇಸನೇ ಬಯಸು'
'ಆಚಾರವೇ ಸ್ವರ್ಗ. ಅನಾಚಾರವೇ ನರಕ'
'ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದರೆ
ಹಿಡಿದಿರ್ಪಲಿಂಗ ಘಟಸರ್ಪನೋಡಾ'
'ಕಾಯಕವೇ ಕೈಲಾಸ'
ಸದುವಿನಯವೇ ಸದಾಶಿವನೊಲುಮೆಯಯ್ಯಾ'
ದೇವಲೋಕ ಮರ್ತ್ಯಲೋಕವೆಂಬುದು
ಬೇರಿಲ್ಲ ಕಾಣಿರೋ.
ಸತ್ಯವ ನುಡಿವುದೇ ದೇವಲೋಕ,
ಮಿಥ್ಯವ ನುಡಿವುದೇ ಮರ್ತ್ಯಲೋಕ,
ಆಚಾರವೇ ಸ್ವರ್ಗ, ಅನಾಚಾರವೇ ನರಕ

ಕೂಡಲಸಂಗಮದೇವಾ, ಇದಕ್ಕೆ ನೀವೇ ಪ್ರಮಾಣು.

## ೨.ಧರ್ಮಜ್ಯೋತಿ ಸ್ವಾಮಿ ವಿವೇಕಾನಂದರ ಸಂದೇಶ

'Education is the manifestation of the pefection already in man'.

'We want that education by which character is formed, strength of mind is increased, the intellect is expanded and by which One can stand on one's own feet'.

The Teacher must not teach with any ulterior selfish motive for money, name or fame; His work must be simply out of love, out of pure love for mankind at large'

'We are, what our thoughts have made us'.
'Awake, Arise, stop not, till the goal is reached'
'Your country requires heroes; be heroes!'

## ೩. ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿಯವರ ಸಂದೇಶ

"ಶಾಲೆ ಕಾಲೇಜುಗಳೆಂದರೆ ಪವಿತ್ರ ಮಂದಿರಗಳಿದ್ದ ಹಾಗೆ, ಅಲ್ಲಿ ಹೀನ ಇಲ್ಲವೆ ಅಪವಿತ್ರವಾದುದು ಯಾವುದೂ ನಡೆಯಲಾಗದು. ಶಾಲೆ- ಕಾಲೇಜುಗಳೆಂದರೆ ಚಾರಿತ್ರ್ಯವನ್ನು ನಿರ್ಮಾಣ ಮಾಡುವ ಕಾರಖಾನೆಗಳಿದ್ದ ಹಾಗೆ, ಒಳ್ಳೆಯ ನಾಗರಿಕರಾಗಲಿ ಎಂದು ತಾಯಿ - ತಂದೆಗಳು ತಮ್ಮ ಮಕ್ಕಳನ್ನು ಅಲ್ಲಿ ಕಳಿಸುತ್ತಾರೆ. ಯಾವ ಬೇಕಾದ ವಂಚನೆಯನ್ನೂ ಮಾಡಬಲ್ಲ ಭಾವೀ ಕೊಲೆಗಡಕನೆಂದು ಪ್ರತಿಯೊಬ್ಬ ವಿದ್ಯಾರ್ಥಿಯನ್ನೂ ಸಂಶಯದಿಂದ ನೋಡುವಂಥ ಪ್ರಸಂಗವು ಬರುವುದಾದರೆ ಅದು ನಿಜವಾಗಿಯೂ ನಮ್ಮ ದೇಶದ ದುಃಖದ ದಿನ".

'ಶಿಕ್ಷಕರು ವಿದ್ಯಾರ್ಥಿಗಳ ಮೆದುಳನ್ನು ಬಲಿಷ್ಠಗೊಳಿಸುವುದಕ್ಕಿಂತ ಅವರ ಹೃದಯವನ್ನು ಹದಗೊಳಿಸಲಿ'.

'ಬಾಯಿಂದ ಒಂದನ್ನು ಕಲಿಸಿ, ಮನಸ್ಸಿನಲ್ಲಿ ಮತ್ತೊಂದನ್ನು ನೆನೆಯುವ ಶಿಕ್ಷಕನಿಗೆ ಧಿಕ್ಕಾರವಿರಲಿ'.

## ೪. ವಿಶ್ವಕವಿ ರವೀಂದ್ರನಾಥ ಠಾಕೂರ ಅವರ ಸಂದೇಶ

'ಸಂಸಾರದಲ್ಲಿ ಸಂಕುಚಿತ ದೃಷ್ಟಿಯ, ಭಿನ್ನತಾಭಾವದ ಗೋಡೆಗಳು ಬೇಡ. ವಿಶ್ವಪ್ರೇಮದ ಸೇತುವೆಗಳನ್ನು ನಾವು ನಿರ್ಮಿಸೋಣ'.

'ಸೂರ್ಯನು ಅಸ್ತವಾದನೆಂದು ಅಳುತ್ತ ಕುಳಿತರೆ ಚಿಕ್ಕೆಗಳೂ ಕಾಣದೆ ಹೋಗುತ್ತವೆ.

'Life is sweet I do not want to die'.

'ದೈನಂದಿನ ಕ್ಷುದ್ರ ವಿಷಯಗಳನ್ನು ಮೆಟ್ಟಿ ನಿಲ್ಲುವ ಸ್ಥೈರ್ಯವ ನೀಡೆನಗೆ ಪ್ರಭುವೇ'.

ಕತ್ತಲೆ ಕವಿದ ಗುಡಿಯ ಮೂಲೆಯಲಿ ಕುಳಿತು ದೇವನನು ಅರಸುತಿಹೆಯೇನು ನೀನು? ಮುಚ್ಚಿದ ಕಣ್ಣು ತೆರೆ. ನಿನ್ನ ಕಣ್ಮುಂದೆ ಎಲ್ಲೆಲ್ಲಿಯೂ ದೇವನಿಹನು.

# ಲೇಖಕರ ನಿವೇದನೆ

ಸರ್ವಪಲ್ಲಿ ಡಾ|| ಎಸ್. ರಾಧಾಕೃಷ್ಣನ್‌ರು ನಮ್ಮ ನಾಡು ಕಂಡ ಮಹಾನ್ ತತ್ವಜ್ಞಾನಿ, ಶಿಕ್ಷಣ ತಜ್ಞ, ರಾಜಕೀಯ ಮುತ್ಸದ್ದಿಯಾಗಿದ್ದವರು. ಶ್ರೀಯುತರು ಶಿಕ್ಷಕ ವೃತ್ತಿಯ ಗೌರವ ಮತ್ತು ಪಾವಿತ್ರ್ಯತೆಯ ಪ್ರತೀಕವಾಗಿದ್ದರು. ಅವರ ಜನ್ಮದಿನವನ್ನು ಅಂದರೆ ಸಪ್ಟೆಂಬರ ೫ನ್ನು ಪ್ರತಿವರುಷ 'ಶಿಕ್ಷಕ ದಿನಾಚರಣೆ' ಎಂದು ಆಚರಿಸಲಾಗುತ್ತಿದೆ. ಇದು ನಮ್ಮ ದೇಶದ ಅಷ್ಟೇ ಏಕೆ ಇಡೀ ಜಗತ್ತಿನ ಶಿಕ್ಷಕ ಸಮುದಾಯಕ್ಕೆ ಗೌರವದ ದಿನವಾಗಿದೆ.

ನಾನು ಬಾಲ್ಯದಲ್ಲಿ ಒಳ್ಳೆಯ ಶಿಕ್ಷಕರ ಮಾರ್ಗದರ್ಶನದಲ್ಲಿ ಬೆಳೆದುಬಂದವನು. ನಮ್ಮ ಅಜ್ಜ, ಕಕ್ಕ, ಮಾವನವರು ಶಿಕ್ಷಕ ವೃತ್ತಿಯಲ್ಲಿ ಆದರ್ಶ ಜೀವನ ಸಾಗಿಸಿದವರು. 'ಶೀಲ-ಕ್ಷಮೆ-ಕರ್ತವ್ಯನಿಷ್ಠೆ'ಯ ತ್ರಿವೇಣಿ ಸಂಗಮವಾಗಿದ್ದವರು. ಅವರ ಆಶೀರ್ವಾದ ಹೊತ್ತು ಬೆಳೆದವನು ನಾನು. ತಂದೆ-ತಾಯಿಯರ ಕೃಷಿ ಕಾಯಕದ ಪ್ರಸಾದ ಉಂಡು ಬೆಳೆದು, ಶಿಕ್ಷಕನಾಗಿ ಕಾಯಕದಲ್ಲಿ ತೊಡಗಿಸಿಕೊಂಡವನು.

ವಿಜ್ಞಾನ (B.Sc) ವಿದ್ಯಾರ್ಥಿಯಾಗಿದ್ದ ನನ್ನಲ್ಲಿ ತತ್ವಜ್ಞಾನದ ಅಭಿರುಚಿ ಬಿತ್ತಿ-ಬೆಳೆಸಿದ ನನ್ನ ಜ್ಞಾನಗುರು ವಿಜಾಪುರದ ಜ್ಞಾನಯೋಗಿಗಳಾದ ಖ್ಯಾತ ತತ್ವಜ್ಞಾನಿ ಶ್ರೀ ಸಿದ್ಧೇಶ್ವರಸ್ವಾಮಿಗಳ ಸಾನಿಧ್ಯವು -ನಾನು ತತ್ವಜ್ಞಾನದಲ್ಲಿ ಸ್ನಾತಕೋತ್ತರ ಪದವಿ ಪಡೆಯಲು ಪ್ರೇರಕವಾಯಿತು.

ಧಾರವಾಡದ ಕವಿ-ಸಾಹಿತಿ-ತತ್ವವೇತ್ತ ವಿದ್ವಾಂಸರ, ಪ್ರಾಧ್ಯಾಪಕರ ಒಡನಾಟ, ಕರ್ನಾಟಕ ಕಾಲೇಜಿನಲ್ಲಿ ತತ್ವಜ್ಞಾನ ಪ್ರಾಧ್ಯಾಪಕನಾಗಿ ಗದಗ ಜೆ.ಟಿ. ಕಾಲೇಜಿನಲ್ಲಿ ತತ್ನಜ್ಞಾನ ಹಾಗೂ ಧರ್ಮದರ್ಶನದ ಪ್ರಾಧ್ಯಾಪಕನಾಗಿ ಸೇವೆ ಸಲ್ಲಿಸುವ ಕಾಲಕ್ಕೆ ಪೌರ್ವಾತ್ಯ -ಪಾಶ್ಚಿಮಾತ್ಯ ತತ್ವಜ್ಞಾನ ಆಳವಾಗಿ ಓದುವ ಅವಕಾಶ ಲಭ್ಯವಾಯಿತು.

ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಉನ್ನತ ಶಿಕ್ಷಣಕ್ಕಾಗಿ ಬಂದಾಗ್ಗೆ ಮದ್ರಾಸಿಗೆ ಹೋಗಿದ್ದಾಗ ನಿವೃತ್ತ ರಾಷ್ಟ್ರಪತಿ, ಶಿಕ್ಷಣತಜ್ಞ, ತತ್ವವೇತ್ತ ಡಾ|| ರಾಧಾಕೃಷ್ಣನ್‌ರ ದರ್ಶನ, ಸಂದರ್ಶನ ಅವರ ಕುರಿತು ವಿಶೇಷ ಅಧ್ಯಯನಕ್ಕೆ ಪ್ರೇರಕವಾಯಿತು. ಇದರ ಪರಿಣಾಮದ ಫಲವೇ ಈ ಕೃತಿಯಾಗಿದೆ.

ಈ ಕೃತಿ ರಚನೆಯ ಕಾಲಕ್ಕೆ ಸಹಾಯ -ಸಹಕಾರ ನೀಡಿದ, ಅಭಿಪ್ರಾಯ ಬರೆದು ಕಳಿಸಿದ ಪೂಜ್ಯರಿಗೆಲ್ಲ ಭಕ್ತಿಯ ಶರಣು-ಶರಣಾರ್ಥಿಗಳು

ರಾಮದುರ್ಗ
- ಸಿದ್ಧಣ್ಣ ಲಂಗೋಟಿ

೫.೯.೧೯೮೮

## The great Philosopher & Thinker
# His Holiness Sri Siddeshwar Swamiji
## Jnana Yogashrama, Bijapur.

I saw your book on Radhakrishnan and did a cursory reading out of curiosity. Beautifully written. With a sizable bibliography, you have made it a reliable source of information. It helps us to understand the great philosopher his life and thinking. In the centenary year, this probably, is the first book in kannada, honouring his memory. The credit goes to you. I am very much pleased with this work and expect such books from you in the future.

ಡಾ.ರಾಧಾಕೃಷ್ಣನ್ ಅವರ ಮೇಲೆ ನೀವು ಬರೆದಿರುವ ಪುಸ್ತಕವನ್ನು ಕೂತೂಹಲದಿಂದ ಹಾಗೂ ಸೂಕ್ಷ್ಮವಾಗಿ ಓದಿದೆ. ತುಂಬಾ ಚೆನ್ನಾಗಿ ಬರೆದಿದ್ದೀರಿ. ಅವರ ಸಮಗ್ರ ಗ್ರಂಥಗಳ ಮಾಹಿತಿಯೊಂದಿಗೆ ಸಂಪೂರ್ಣ ಸಾಧನೆಯನ್ನು ನೀಡಿದ್ದೀರಿ. ಇದು ಒಬ್ಬ ಮಹಾನ್ ತತ್ವಜ್ಞಾನಿಯ ಜೀವನ ಹಾಗೂ ವಿಚಾರಗಳನ್ನು ನಮಗೆ ಅರಿತುಕೊಳ್ಳಲು ಸಹಾಯಕವಾಗಿದೆ.

ಡಾ. ರಾಧಾಕೃಷ್ಣನ್‌ರ ಶತಮಾನೋತ್ಸವ ವರ್ಷದಲ್ಲಿ (೧೯೮೮) ಬಹುಶಃ ಕನ್ನಡದಲ್ಲಿ ಬಂದ ಪ್ರಥಮ ಗ್ರಂಥವಿದು. ಇದು ಅವರ ಸ್ಮರಣೆಯಲ್ಲಿ ಬಂದ ಗೌರವಾನ್ವಿತ ಕೃತಿಯಾಗಿದೆ. ಇದರ ಗೌರವ ನಿಮಗೆ ಸಲ್ಲುತ್ತದೆ. ನಾನು ಈ ಕೃತಿಯಿಂದ ಸಂತೋಷಗೊಂಡಿದ್ದೇನೆ. ಭವಿಷ್ಯದಲ್ಲಿ ತಮ್ಮಿಂದ ಇಂತಹದೇ ಕೃತಿಗಳು ರಚನೆಯಾಗಲಿ ಎಂದು ಆಶಿಸುತ್ತೇನೆ.

- ಶ್ರೀ ಸಿದ್ಧೇಶ್ವರ ಸ್ವಾಮಿಗಳು
ಜ್ಞಾನಯೋಗಾಶ್ರಮ ವಿಜಾಪುರ.

# ಪರಿವಿಡಿ

## ಶಿಕ್ಷಣತಜ್ಞ, ವಿಶ್ವವಿಖ್ಯಾತ ತತ್ವಜ್ಞಾನಿ

## ಡಾ. ಸರ್ವಪಲ್ಲಿ ರಾಧಾಕೃಷ್ಣನ್‌ರ ಜೀವನ-ಸಾಧನೆ - ವಿಚಾರಗಳು

ಶಿಕ್ಷಣತಜ್ಞ, ವಿಶ್ವವಿಖ್ಯಾತ ತತ್ತ್ವಜ್ಞಾನಿ

# ಡಾ|| ಸರ್ವಪಲ್ಲಿ ರಾಧಾಕೃಷ್ಣನ್‌ರು

## ಜೀವನ - ಸಾಧನೆ - ವಿಚಾರಗಳು

(೧೮೮೮ - ೧೯೭೫)

### ೧. ಪೀಠಿಕೆ

ಪ್ರಪಂಚದ ಧಾರ್ಮಿಕ ಇತಿಹಾಸದಲ್ಲಿ ಭಾರತದೇಶಕ್ಕೆ ತನ್ನದೇ ಆದ ಹಿರಿಮೆ - ಗರಿಮೆಗಳಿವೆ. ಈ ದೇಶದ ತತ್ತ್ವಜ್ಞಾನವು ವಿಶ್ವದಲ್ಲೆಲ್ಲ ಶ್ರೇಷ್ಠ ಮಟ್ಟದ್ದೆಂದು ಖ್ಯಾತಿಯನ್ನು ಹೊಂದಿದೆ. ತತ್ತ್ವಜ್ಞಾನದ ದೃಷ್ಟಿಯಿಂದ ನೋಡಿದಾಗ ಪ್ರಪಂಚದಲ್ಲಿ **ಭಾರತೀಯ ತತ್ತ್ವಜ್ಞಾನ** ಮತ್ತು **ಗ್ರೀಕ ತತ್ತ್ವಜ್ಞಾನಗಳು** ಅತೀ ಪುರಾತನವಾದವುಗಳೆಂಬುದು ತತ್ತ್ವವೇತ್ತರ ಗಮನಕ್ಕೆ ಬಂದಿದೆ.

ಗ್ರೀಕರ ತತ್ತ್ವಜ್ಞಾನ ವಿಚಾರಗಳಲ್ಲಿ - ತತ್ತ್ವಜ್ಞಾನಿಯೆಂದು ಪ್ರಥಮತಃ ಪರಿಗಣಿಸಬೇಕಾದ ವ್ಯಕ್ತಿ **ಥೇಲ್ಸ್‌ನು**. ಇವನ ನಂತರ ತತ್ತ್ವಜಿಜ್ಞಾಸೆಗೆ ಒಂದು ರೂಪುಕೊಟ್ಟವರು **ಪೈಥಾಗೋರಸ್** ಹಾಗೂ **ಸಾಕ್ರೆಟಿಸ್**. ಅನಂತರ **ಪ್ಲೇಟೋ - ಆರಿಸ್ಟಾಟಲ್** ಇವರುಗಳು. ಈ ತತ್ತ್ವಚಿಂತನೆ ಬೆಳೆದು ಬಂದುದು ಕ್ರಿ. ಪೂ. ೬ ನೇ ಶತಮಾನದಲ್ಲಿ ಮಾತ್ರ. ಪಾಶ್ಚಿಮಾತ್ಯ ದೇಶಗಳಲ್ಲಿ ಕ್ರಿ. ಪೂ. ೬ನೇ ಶತಮಾನವು ತತ್ತ್ವಜ್ಞಾನದ ಆರಂಭದ ಕಾಲವೆಂದು ಹೇಳಬಹುದಾಗಿದೆ.

ಆದರೆ ಕ್ರಿ. ಪೂ. ೬ನೇ ಶತಮಾನದ ಕಾಲಕ್ಕೆ ಭಾರತದತ್ತ ದೃಷ್ಟಿ ಹೊರಳಿಸಿ ನೋಡಿದರೆ - ಇಲ್ಲಿ ಜೈನ ಮತ್ತು ಬೌದ್ಧಮತಗಳು ಪ್ರಾರಂಭಗೊಂಡಿದ್ದವು. ಜೈನ-ಬೌದ್ಧ ಮತಗಳ ಪೂರ್ವದಲ್ಲಿ ಈ ದೇಶದಲ್ಲಿ ಸಾವಿರಾರು ವರುಷ ಮುಂಚೆಯೇ ಶೈವ ಮತ್ತು ವೈದಿಕ ಧರ್ಮ ಸಂಸ್ಕೃತಿಗಳು ಉದಯವಾಗಿ ತತ್ತ್ವಜಿಜ್ಞಾಸೆ ನಡೆಸಿದ್ದವು. ಸಮಗ್ರ ಅಖಂಡ ಭರತಭೂಮಿಯಲ್ಲೆಲ್ಲಾ ಆದಿ ದ್ರಾವಿಡ ಜನಾಂಗ ವ್ಯಾಪಿಸಿತ್ತು. ಅವರ ಅಧಿದೇವತೆ ಶಿವ. ಶಿವಪ್ರಣೀತವಾಗಿ ರೂಪುಗೊಂಡ ಶೈವಧರ್ಮ, ಶೈವಧರ್ಮಿಯರ ಸಿದ್ಧಾಂತ ಆಚಾರ ವಿಚಾರಗಳಿಗಾಗಿ ಹೇಳಲ್ಪಟ್ಟ ಶಿವಾಗಮಗಳು: ಅನಂತರದಲ್ಲಿ ಆರ್ಯಜನಾಂಗದ ಆಗಮನ, ತದನಂತರದಲ್ಲಿ ಮೂಡಿಬಂದ ವೈದಿಕ ಸ್ಮಾರ್ತ, ವೈಷ್ಣವ ಮತ ಸಿದ್ಧಾಂತಗಳು, ಬೌದ್ಧ-ಜೈನ ಧರ್ಮಗಳ ಕಾಲಕ್ಕಿಂತ ಹಿಂದೆಯೇ ಹೆಮ್ಮರವಾಗಿ ಬೆಳೆದು ನಿಂತಿದ್ದವು.

ಒಟ್ಟಿನಲ್ಲಿ ಹೇಳುವುದಾದರೆ ಪಾಶ್ಚಿಮಾತ್ಯ ದೇಶಗಳಲ್ಲಿ ತತ್ತ್ವಜ್ಞಾನವು ಬೀಜರೂಪದಲ್ಲಿ ನೆಲದಿಂದ ಮೊಳಕೆಯೊಡೆದು ಕಣ್ಣು ತೆರೆಯುವ ಸಮಯಕ್ಕಾಗಲೇ, ಭಾರತದಲ್ಲಿ ತತ್ತ್ವಜ್ಞಾನವು ಮೊಳಕೆಯೊಡೆದು ಗಿಡವಾಗಿ, ಮರವಾಗಿ, ಹೆಮ್ಮರವಾಗಿ ಬೆಳೆದು ನಿಂತು ಹೂ - ಹಣ್ಣು- ಕಾಯಿಗಳಿಂದ ತುಂಬಿಕೊಂಡು, ವಿಶ್ವದ ತತ್ತ್ವಜಿಜ್ಞಾಸುಗಳೆಂಬ ಪಕ್ಷಿಗಳಿಗೆ ಸಂತೃಪ್ತಿಯನ್ನೀಯುವ ನಂದನವನವಾಗಿತ್ತೆನ್ನಬಹುದು.

ತತ್ವದರ್ಶನದ ದೃಷ್ಟಿಯಿಂದ ನೋಡುವುದಾದರೆ ಶೈವಾಗಮಗಳು, ವೇದಗಳು, ಉಪನಿಷತ್ತುಗಳು, ಸ್ಮೃತಿಗಳು, ರಾಮಾಯಣ - ಮಹಾಭಾರತದಂತಹ ಮಹಾ ಕಾವ್ಯಗಳು, ಶೈವ - ವೈಷ್ಣವ ಪುರಾಣಗಳು, ಚಾರ್ವಾಕ ಜೈನ - ಬೌದ್ಧ ಮೊದಲಾದ ಅವೈದಿಕ ಚಿಂತನಧಾರೆ, ನ್ಯಾಯ - ವೈಶೇಷಿಕ - ಸಾಂಖ್ಯ - ಯೋಗ - ಪೂರ್ವ ಮೀಮಾಂಸೆ - ಉತ್ತರ ಮೀಮಾಂಸೆ (ವೇದಾಂತ)ಗಳಂತಹ ಷಟ್‌ದರ್ಶನಗಳು. ಶಿವಾದ್ವೈತ, ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ, ಶುದ್ಧಾದ್ವೈತ, ಅಚಿಂತ್ಯ, ಭೇದಾಭೇದಗಳಂತಹ ಸಿದ್ಧಾಂತಗಳು; ಶೈವಧರ್ಮ ಅದರ ಪ್ರಭೇದಗಳಾದ ಕಾಳಾಮುಖ, ಪಾಶುಪತ, ಲಕುಲೀಶ, ಕಾಶ್ಮೀರಶೈವ, ತಮಿಳುಶೈವ, ರಸಶೈವ ಮುಂತಾದ ಮತಗಳು; ವೇದಾಗಮ ಪ್ರಮಾಣ ತಿರಸ್ಕರಿಸಿ ಸ್ವಾನುಭಾವದ ನೆಲಗಟ್ಟಿನ ಮೇಲೆ ಶ್ರೀ ಬಸವೇಶ್ವರರಿಂದ ಸ್ಥಾಪನೆಗೊಂಡ ಲಿಂಗವಂತ (ವೀರಶೈವ) ಧರ್ಮ, ಶ್ರೀ ಗುರುನಾನಕರಿಂದ ಸ್ಥಾಪನೆಗೊಂಡ ಶೀಖಧರ್ಮ, ಇದಲ್ಲದೇ ತುಲಸಿ-ಸೂರ-ಕಬೀರ ಹಾಗೂ ನೂರಾರು ಜನ ಸಂತರು, ಶರಣರು, ಮಹಾತ್ಮರುಗಳ ಆಧ್ಯಾತ್ಮ ತತ್ತ್ವ ಚಿಂತನೆಯ ಬೃಹದಾಕಾರದ ಸಂಪದ್ಭರಿತ ತೋಟದಂತಿತ್ತು ಈ ನಮ್ಮ ಜಂಬೂದ್ವೀಪ ಭಾರತ ದೇಶ.

ವಿಶ್ವಭಾವೈಕ್ಯತೆಯ - ಮಾನವಕುಲದ ಕಲ್ಯಾಣದ - ಸಕಲಜೀವರಾಶಿಗಳಿಗೆ ಲೇಸನೇ ಬಯಸಿದ ತತ್ತ್ವಜ್ಞಾನ - ಧರ್ಮ - ಸಿದ್ಧಾಂತ - ದರ್ಶನ - ಸಂಸ್ಕೃತಿಗಳನ್ನು ನೀಡಿದ ನಮ್ಮ ದೇಶದ ಭವ್ಯ ಪರಂಪರೆಯು ಕಾಲಾನಂತರದಲ್ಲಿ ತುಕ್ಕು ಹಿಡಿದು, ಮಸುಕಾಗುತ್ತಾ ಬಂದಾಗ, ಅದರ ಮೇಲಣ ಜಂಗು ಒರೆಸಿ, ಧೂಳು ಜಾಡಿಸಿ, ಮತ್ತೆ ದೇಶ - ವಿದೇಶಗಳಲ್ಲಿ ಅದನ್ನು ಮೆರೆಯಿಸಿದ ಕೀರ್ತಿಯು ಧೀರ ಪುರುಷ, ಕ್ರಾಂತಿ ಸಿಂಹ ಸ್ವಾಮಿ ವಿವೇಕಾನಂದರಿಗೆ, ತದನಂತರ ತತ್ತ್ವಜ್ಞಾನಿ ಡಾ. ಸರ್ವಪಲ್ಲಿ ರಾಧಾಕೃಷ್ಣನ್ನರಿಗೆ ಸಲ್ಲುತ್ತದೆ.

ತಮ್ಮ ಸಿಂಹವಾಣಿಯಿಂದ ದೇಶ - ವಿದೇಶಗಳಲ್ಲೆಲ್ಲ ಭಾರತದ ಹಿರಿಮೆ - ಗರಿಮೆಗಳ ಬಗ್ಗೆ, ಧರ್ಮ - ತತ್ತ್ವಗಳ ಬಗ್ಗೆ ಗುಡುಗು ಹಾಕಿ ವಿಶ್ವದ ಜನ

ಭಾರತದೆಡೆಗೆ ನೋಡುವಂತೆ ಮಾಡಿದವರು. ಭಾರತೀಯರೂ ಕೂಡ ತಮ್ಮ ಆಲಸ್ಯದ ನಿದ್ರೆಯಿಂದ ಎಚ್ಚತ್ತುಕೊಳ್ಳುವಂತೆ ಮಾಡಿದ ಧೀಮಂತ ಚೇತನ ಸ್ವಾಮಿ ವಿವೇಕಾನಂದರು. ಅನಂತರ ದ್ವಿತೀಯ ವಿವೇಕಾನಂದರೆಂದು ಹೆಸರು ವಾಸಿಯಾದ, ಇಪ್ಪತ್ತನೇ ಶತಮಾನದ ಭಾರತದ ಶ್ರೇಷ್ಠ ತತ್ತ್ವಜ್ಞಾನಿಯೆಂದೆನಿಸಿದ, ದೇಶವಿದೇಶಗಳಿಗೆಲ್ಲ ಭಾರತದ ತತ್ತ್ವದರ್ಶನದ ಅಮೃತವನ್ನುಣಿಸಿದ ಚೇತನ ಡಾ॥ ಎಸ್. ರಾಧಾಕೃಷ್ಣನ್ನರು.

ಡಾ॥ ರಾಧಾಕೃಷ್ಣನ್ನರು ಆದರ್ಶ ಶಿಕ್ಷಕರಾಗಿ. ತತ್ತ್ವಜ್ಞಾನಿಯಾಗಿ, ಶಿಕ್ಷಣ ತಜ್ಞರಾಗಿ, ರಾಜಕೀಯ ಮುತ್ಸದ್ದಿಯಾಗಿ, ವಿಶ್ವಕುಟುಂಬಿಯಾಗಿ ಹೆಸರುವಾಸಿಯಾದವರು. ಅವರು ತಮ್ಮ ಬಾಳಿನ ೮೭ ವರ್ಷಗಳಲ್ಲಿ (೧೮೮೮ - ೧೯೭೫) ಸಾಧಿಸಿದ ಸಾಧನೆಯನ್ನು ಮನಗಂಡಾಗ ಭಾರತೀಯರೆಲ್ಲರಿಗೂ ಹೆಮ್ಮೆಯಾದರೆ. ವಿಶ್ವದ ಜನತೆ ನಿಬ್ಬೆರಗಾಗುತ್ತದೆ.

ಡಾ॥ ಎಸ್. ರಾಧಾಕೃಷ್ಣನ್ನರು ಭಾರತೀಯ ಭವ್ಯ ಪರಂಪರೆಯ ಆದರ್ಶ ತತ್ತ್ವಜ್ಞಾನದ ಶಿಕ್ಷಕರಾಗಿದ್ದರಿಂದ ಅವರ ಜನ್ಮ ದಿನವಾದ **ಸಪ್ಟೆಂಬರ ೫ನ್ನು ಪ್ರತಿ ವರ್ಷವೂ "ಶಿಕ್ಷಕ ದಿನಾಚರಣೆ"** ಎಂದು ಆಚರಣೆಯಲ್ಲಿ ತರಲಾಗಿದೆ. ನಮ್ಮ ನಾಡಿನ ಭವ್ಯ ಪರಂಪರೆ - ಸಂಸ್ಕೃತಿಯನ್ನು ತಾವೂ ಅಳವಡಿಸಿಕೊಂಡು, ಭವಿಷದ್ ಭಾರತದ ನಾಗರಿಕರನ್ನೂ ನಿರ್ಮಾಣ ಮಾಡುವ ಜವಾಬ್ದಾರಿಯನ್ನು ಹೊತ್ತಿರುವ ಶಿಕ್ಷಕರು, ಡಾ॥ ರಾಧಾಕೃಷ್ಣನ್‌ರನ್ನು ಸ್ಮರಿಸಿಕೊಂಡು, ಅವರ ಜೀವನ - ಸಾಧನೆ, ವಿಚಾರಗಳನ್ನು ಅರಿತುಕೊಂಡು, ಅವರು ತೋರಿದ ಆದರ್ಶ ಮಾರ್ಗದಲ್ಲಿ ಸಾಗಬೇಕೆಂಬ ಸದುದ್ದೇಶದಿಂದ 'ಶಿಕ್ಷಕ ದಿನಾಚರಣೆ' ಜಾರಿಗೆ ಬಂದಿದೆ.

ಇಂತಹ ಶ್ರೇಷ್ಠ ತತ್ತ್ವಜ್ಞಾನಿ, ದಾರ್ಶನಿಕ, ತತ್ತ್ವ ಋಷಿಯ ಜೀವನ ಸಾಧನೆ ಅವರ ವಿಚಾರಗಳ ಕಿರು ಪರಿಚಯ ನಮ್ಮ ನಾಡಿನ ಶಿಕ್ಷಕರಿಗೆ ಮಾಡಿಕೊಡುವ ಒಂದು ಪ್ರಾಮಾಣಿಕ ಪ್ರಯತ್ನ ಇಲ್ಲಿ ಮಾಡಲಾಗಿದೆ. ನಾನೊಬ್ಬ ತತ್ತ್ವಜ್ಞಾನ ವಿದ್ಯಾರ್ಥಿಯಾಗಿ, ತತ್ತ್ವಜ್ಞಾನ ಶಿಕ್ಷಕನಾಗಿ ಡಾ॥ ರಾಧಾಕೃಷ್ಣನ್ನರ ಕೃತಿಗಳನ್ನು ಅಧ್ಯಯನ ಮಾಡುವ, ಇವರ ವಿಚಾರಗಳನ್ನು ವಿದ್ಯಾರ್ಥಿಗಳಿಗೆ ತಿಳಿಸುವ ಅವಕಾಶ ನನಗೆ ಈ ಹಿಂದೆ ಒದಗಿ ಬಂದಿತ್ತು. ಅದು ನನ್ನ ಸುಕೃತದ ಫಲವೆಂದು ಭಾವಿಸಿ, ಈಗ ಈ ಅಳಿಲು ಸೇವೆಗೆ ಕೈಹಾಕಿರುವೆನು.

ತತ್ತ್ವಜ್ಞಾನವೆಂಬುದು ಕೇವಲ ಓದಿನ ಮಾತಲ್ಲ, ಓದಿದರೆ ತಿಳಿಯದು, ಅದನ್ನು ಅಧ್ಯಯನ-ಚಿಂತನ-ಮನನ ಮಾಡಿ, ಆಚರಣೆಯಲ್ಲಿ ತಂದಾಗ ಮಾತ್ರ ಅದು ಅನುಭವವೇದ್ಯವಾಗುತ್ತದೆ. ಈ ವಿಚಾರದ ಹಿನ್ನೆಲೆಯಲ್ಲಿ ಈ ಕೃತಿಯ ಚಿಂತನ

ನಡೆಯುಬೇಕೆಂಬುದೇ ಹೃದಯದ ಕಳಕಳಿ, ಬಿನ್ನಹ ನಮ್ಮ ಶಿಕ್ಷಕರಿಗೆ ವಿದ್ಯಾರ್ಥಿಗಳಿಗೆ, ತತ್ತ್ವಜಿಜ್ಞಾಸುಗಳಿಗೆ.

ಡಾ|| ರಾಧಾಕೃಷ್ಣನ್‌ರ ಜೀವನ-ಸಾಧನೆ ಅವರ ವಿಚಾರಗಳನ್ನು ಅರಿಯುವುದೆಂದರೆ ಅದೊಂದು ತಪಸ್ಸೆನ್ನಬಹುದು. ಅವರ ವಿಚಾರಗಳನ್ನು ಕಿಂಚಿತ್ತಾದರೂ ನಮ್ಮ ನಾಡಿನ ಶಿಕ್ಷಕರು ಅರಿತುಕೊಂಡು, ಭಾರತೀಯ ಉನ್ನತ ಧ್ಯೇಯಾದರ್ಶಗಳ ಸಂಸ್ಕೃತಿ-ಸತ್ವವನ್ನು ತಮ್ಮ ತಮ್ಮ ವಿದ್ಯಾರ್ಥಿಗಳಲ್ಲಿ ಒಡಮೂಡಿಸಲು ಪ್ರಯತ್ನಿಸಿದರೆ, ಮಕ್ಕಳ ಭವಿತವ್ಯ, ತನ್ಮೂಲಕ ನಾಡಿನ ನೈತಿಕ ಶಕ್ತಿ ಭದ್ರವಾಗುವದೆಂಬ ಅಚಲ ವಿಶ್ವಾಸ ನನ್ನದು.

ಡಾ|| ರಾಧಾಕೃಷ್ಣನ್‌ರು ಹೇಳುತ್ತಾರೆ -"The prevalent system of education suffers from two serious defects, that it was mainly literary in character and that it ignored the national tradition. It is relatively inexpensive to train students in Arts, Law and Commerce, but it costs a great deal to train them in Science, Engineering and Technology which are essential for the development of our resources and for raising our standards of living. (The Present Crisis of Faith)

## ೨. ಡಾ|| ರಾಧಾಕೃಷ್ಣನ್‌ರ ಜನನ-ಬಾಲ್ಯ ಶಿಕ್ಷಣ

ಡಾ|| ರಾಧಾಕೃಷ್ಣನ್ **ತಮಿಳು ನಾಡಿನ** ಮದ್ರಾಸಿನಿಂದ ಉತ್ತರ ಪಶ್ಚಿಮಕ್ಕೆ ಸುಮಾರು ೪೦ ಮೈಲು ದೂರದಲ್ಲಿರುವ **ತಿರುತನಿ** ಎಂಬ ಚಿಕ್ಕ ಗ್ರಾಮದಲ್ಲಿ **೧೮೮೮ನೇ ಇಸ್ವಿ ಸಪ್ಟೆಂಬರ ೫ ರಂದು** ಸಾಧಾರಣ ಪರಿವಾರದಲ್ಲಿ ಜನಿಸಿದರು. ತಿರುತನಿ ಗ್ರಾಮವು ಸುಪ್ರಸಿದ್ಧ ಧಾರ್ಮಿಕ ಯಾತ್ರಾಸ್ಥಳವಾಗಿದೆ. ಅದು ಶೈವಧರ್ಮದ ಶಿವಾಲಯವುಳ್ಳ ಧಾರ್ಮಿಕ ಕ್ಷೇತ್ರ. ಪ್ರತಿದಿನ ನೂರಾರು ಯಾತ್ರಿಕರು ಅಲ್ಲಿಗೆ ಭಕ್ತಿ-ಭಾವದಿಂದ ಬಂದು ಹೋಗುತ್ತಿದ್ದರು. ತಮಿಳುನಾಡು ವಿಶೇಷವಾಗಿ ಶೈವಧರ್ಮದ, ಅದರಲ್ಲಿಯೂ ಶುದ್ಧಶೈವದ ಅಂದರೆ ಅರವತ್ಮೂರು ಪುರಾತನರು ಬಾಳಿ ಬೆಳಗಿದ ನಾಡು ಎಂದು ವಿಖ್ಯಾತವಾಗಿದೆ.

ಇಂತಹ ಶಿವಭಕ್ತಿ ಸಂಪನ್ನ ನಾಡಿನ ತಿರುತನಿ ಎಂಬ ಶೈವ ಕ್ಷೇತ್ರದ ಧಾರ್ಮಿಕ ಪರಿಸರದ ಹಳ್ಳಿಯ ಒಂದು ಬಡ ಕುಟುಂಬದಲ್ಲಿ ರಾಧಾಕೃಷ್ಣನ್‌ರು ಜನಿಸಿದರು. **ತಂದೆ ವೀರಾಸ್ವಾಮಿ-ತಾಯಿ ಸೀತಮ್ಮ.** ಇಬ್ಬರೂ ಸಾಂಪ್ರದಾಯಿಕ ಹಿಂದೂ ಪರಂಪರೆಯ ಸಾತ್ವಿಕ ದಂಪತಿಗಳು. ತಂದೆ ಹಿಂದೂ ಸನಾತನ ಆಚರಣೆಯ ವ್ಯಕ್ತಿಯಾಗಿದ್ದರಿಂದ ಮನೆಯಲ್ಲಿ ಧಾರ್ಮಿಕ ವಾತಾವರಣವಿತ್ತು. ಮನೆತನದಿಂದ ಬಡವರಾದುದರಿಂದ ಅವರು ಆ ಊರಿನ ಒಬ್ಬ ಜಮೀನ್ದಾರನ ಹತ್ತಿರ ಲೆಕ್ಕಪತ್ರ ನೋಡಿಕೊಳ್ಳುವ ಮತ್ತು ಜಮೀನು ಉಸ್ತುವಾರಿ ಮಾಡುವ ನೌಕರಿಯನ್ನು ಮಾಡುತ್ತಿದ್ದರು. ಅದರಿಂದ ಅವರಿಗೆ ತಿಂಗಳಿಗೆ ಎಂಟು ರೂ. ಪಗಾರ ದೊರೆಯುತ್ತಿತ್ತು. ಉತ್ಪನ್ನದ ಇಷ್ಟು ಗಳಿಕೆಯಲ್ಲಿಯೇ ಅವರು ತುಂಬಾ ಸರಳವಾಗಿ ತಮ್ಮ ಕುಟುಂಬವನ್ನು ಪೋಷಣೆ ಮಾಡಿಕೊಂಡು ಹೋಗುತ್ತಿದ್ದರು. ತಾಯಿ ಸೀತಮ್ಮಳಂತೂ ಹಳ್ಳಿಯ ನಿರ್ಮಲ ಮನಸ್ಸಿನ, ದೈವಭಕ್ತಿಯುಳ್ಳ ಮಹಿಳೆ, ಅವರಲ್ಲಿಯೂ ಯಾವುದೇ ದುರಾಸೆ ಇಲ್ಲದ್ದರಿಂದ ಇದ್ದುದರಲ್ಲಿಯೇ ಸಂತೃಪ್ತಿಯ ಬದುಕನ್ನು ಬಾಳುತ್ತಿದ್ದರು. ಡಾ|| ರಾಧಾಕೃಷ್ಣನ್ನರು ತಮ್ಮ ತಂದೆ-ತಾಯಿಗಳಿಗೆ ಎರಡನೇ ಮಗುವಾಗಿದ್ದರು.

ಸಾಧಾರಣ ಬಡ ಕುಟುಂಬದಲ್ಲಿ ಜನಿಸಿರುವುದರಿಂದ ಸಿರಿವಂತಿಕೆಯ ಅಥವಾ ಹುಟ್ಟಿನ ಯಾವ ಲಾಭವೂ (ಪ್ರಯೋಜನವೂ) ಬಾಲ್ಯದಲ್ಲಿ ಅವರಿಗಿರಲಿಲ್ಲ. ಅದನ್ನು ಅವರು ಪಾಲ್ ಅರ್ಥರ್ ಸ್ಕಿಲ್ಪ್ ಅವರಿಗೆ ತಮ್ಮ ಜೀವನದ ಮಾಹಿತಿ

ಒದಗಿಸಿದ ಓಲೆಯಲ್ಲಿ ವ್ಯಕ್ತಪಡಿಸಿದ್ದನ್ನು ಕಾಣಬಹುದು. "I have not had any advantages of birth or of wealth"[೧] ಎಂದು ಹೇಳಿಕೊಂಡಿದ್ದಾರೆ. ಅಂದರೆ ಭಾರತದ ಕೋಟ್ಯಾವಧಿ ಸಾಮಾನ್ಯರಲ್ಲಿ ಒಬ್ಬನಾಗಿ ಜನಿಸಿ, ಅಸಾಮಾನ್ಯನಾಗಿ ಬೆಳೆದು ಬಂದ ಅವರ ಬದುಕು-ಸಾಧನೆ-ರೋಮಾಂಚನಕಾರಿಯಾಗಿದೆ.

ಡಾ|| ರಾಧಾಕೃಷ್ಣನ್‌ರ ಪ್ರಾರಂಭದ ಶಿಕ್ಷಣವು ೧೮೯೬ ವರೆಗೆ ಮಾತ್ರ ತಿರುತನಿಯಲ್ಲಿಯೇ ಆಯಿತು. ಬಾಲ್ಯದಲ್ಲಿಯೇ ಅವರಿಗೆ ಧಾರ್ಮಿಕ ವಾತಾವರಣ ದೊರೆತುದರಿಂದ ಸಹಜ ಕುತೂಹಲ-ಅನುಕರಣೆಯ ಭಕ್ತಿಭಾವ ಬೇರೂರಿತ್ತು. ೫-೬ ವರುಷದ ಬಾಲಕನಾಗಿರುವಾಗಲೇ ದೂರ ದೂರದ ಊರುಗಳಿಂದ ತಿರುತನಿಗೆ ಬರುತ್ತಿದ್ದ ನೂರಾರು ಶಿವಭಕ್ತರನ್ನು ನೋಡುವುದು, ಅವರ ಆಚರಣೆ, ಪೂಜೆ, ಭಕ್ತಿ ಕಂಡು ಇವರಲ್ಲಿ ಕುತೂಹಲ. ಇಂತಹ ಸಣ್ಣ ಊರಿಗೆ ಇಷ್ಟು ಜನ ಏಕೆ ಬರುತ್ತಾರೆ? ಈ ದೇವರ ದರ್ಶನದಿಂದ ಇವರಿಗೆ ಏನು ಸಿಗುತ್ತದೆ ? ಇಂಥವೇ ಮುಂತಾದ ಬಾಲಮನಸ್ಸಿನ ಸಂಶಯಗಳು ಇವರನ್ನು ಕಾಡುತ್ತಿದ್ದವಂತೆ. ಅವರು ೭-ಅನೇ ವಯಸ್ಸಿನಲ್ಲಿದ್ದಾಗ ತಿರುತನಿಯಲ್ಲಿ, ಪ್ರತಿ ದಿನ ಶಾಲೆಯಿಂದ ಮನೆಗೆ ಬಂದವರೇ ಪುಸ್ತಕದ ಚೀಲ ಮನೆಯಲ್ಲಿಟ್ಟು ತಾವೂ ಮಂತ್ರವನ್ನು, ಶ್ಲೋಕಗಳನ್ನು ಗುನುಗುನಿಸುತ್ತಾ ಶಿವಮಂದಿರದ ಸುತ್ತುಮುತ್ತ ಸುತ್ತಾಡುತ್ತಿದ್ದರು. ತಾಸುಗಟ್ಟಲೇ ಕೆಲವು ಸಲ ದಿನಗಟ್ಟಲೇ ಅವರು ಅಲ್ಲಿಯೇ ದಿನಗಳನ್ನು ಕಳೆಯತೊಡಗಿದರು.

ಇದನ್ನು ಅರಿತ ತಂದೆ ವೀರಾಸ್ವಾಮಿಯವರು ಮಗನಿಗೆ ಒಳ್ಳೆಯ ಆಂಗ್ಲ ಶಿಕ್ಷಣ ಕೊಡಿಸಬೇಕೆಂಬ ಹಂಬಲದಿಂದ ತಿರುತನಿಯಿಂದ ತಮ್ಮ ಮಗನನ್ನು ಒಯ್ದು ತಿರುಪತಿಯಲ್ಲಿಯ Lutheran Mission High School (ಲೂಥರನ ಮಿಶನ್ ಹೈಸ್ಕೂಲ್)ಗೆ ೧೮೯೬ರಲ್ಲಿ ಸೇರಿಸಿದರು. ಅಲ್ಲಿ ೧೯೦೦ನೇ ಇಸ್ವಿವರೆಗೆ ವಿದ್ಯಾಭ್ಯಾಸ ಮಾಡಿ ನಂತರ ೧೯೦೦ ರಿಂದ ೧೯೦೪ ವರೆಗೆ ಊರ್ಹೀಸ್ ಕಾಲೇಜು ವೆಲ್ಲೋರಾ (Voorhee's College Vellore) ಕ್ಕೆ ಸೇರಿಸಿದರು. ಅಲ್ಲಿಯೂ ಪ್ರಥಮರಾಗಿ ಪಾಸಾಗಿ, ಮುಂದೆ ಮದ್ರಾಸ್ ಕ್ರಿಶ್ಚಯನ್ ಕಾಲೇಜಿನಲ್ಲಿ ೧೯೦೪ ರಿಂದ ೧೯೦೮ ವರೆಗೆ ಉನ್ನತ ಶಿಕ್ಷಣವನ್ನು ಪಡೆದರು.

ಈ ರೀತಿಯಾಗಿ ಡಾ|| ರಾಧಾಕೃಷ್ಣನ್‌ರು ೧೮೯೬ ರಿಂದ ೧೯೦೮ವರೆಗೆ ಹನ್ನೆರಡು ವರುಷಗಳ ಕಾಲ ಕ್ರಿಶ್ಚಿಯನ್ ಮಿಶನ್ ಶಾಲೆ-ಕಾಲೇಜುಗಳಲ್ಲಿಯೇ ವಿದ್ಯಾಭ್ಯಾಸ ಮಾಡಬೇಕಾಗಿ ಬಂದುದರಿಂದ ಅವರು ಇಂತಹ ವಾತಾವರಣದಲ್ಲಿಯೇ

---

೧. 'My Search for Truth in mc Dermott, Ed. Radhakrishnan, p 35

ಬೆಳೆಯಬೇಕಾಯ್ತು. ಆ ಕುರಿತು ಅವರೇ ಒಂದೆಡೆ ಹೀಗೆ ಹೇಳಿದ್ದಾರೆ-"Thus I grew up in an atmosphere where the unseen was a living reality"[೨] ಎಂದಿದ್ದಾರೆ.

ಅಂದಿನ ಕಾಲ, ಕ್ರಿಶ್ಚಿಯನ್ ಧರ್ಮ-ಸಂಸ್ಕೃತಿಯನ್ನು ಭಾರತದ ತುಂಬಾ ಪಸರಿಸಬೇಕೆಂಬ ಹಂಬಲವಿರಿಸಿಕೊಂಡಿದ್ದ ಕಾಲವಾಗಿತ್ತು. ಬಹುತರವಾಗಿ ಕ್ರಿಶ್ಚಿಯನ್ ಶಿಕ್ಷಕರು-ಪ್ರಾಧ್ಯಾಪಕರುಗಳು ತಮ್ಮ ನಡೆ-ನುಡಿಯಲ್ಲಿ ಬೋಧನೆಯಲ್ಲಿ ಭಾರತೀಯರನ್ನು, ಭಾರತೀಯ ಧರ್ಮ-ಸಂಸ್ಕೃತಿಗಳನ್ನು ಸಮಯ-ಸಂದರ್ಭ ದೊರೆತಾಗಲೆಲ್ಲ ಟೀಕಿಸುತ್ತಾ, ಅವಹೇಳನ ಮಾಡುತ್ತಾ ಪಾಠಗಳನ್ನು ಮಾಡುತ್ತಿದ್ದಿರಬಹುದು. ಇದರಿಂದಾಗಿ ಡಾ|| ರಾಧಾಕೃಷ್ಣನ್ನರು ಹಲವಾರು ಸಲ ತಮ್ಮ ಅಧ್ಯಾಪಕರೊಂದಿಗೆ ವಾದವಿವಾದಕ್ಕೆ, ತಾತ್ವಿಕ ಘರ್ಷಣೆಗೆ ಇಳಿಯಬೇಕಾಗುತ್ತಿತ್ತು. ಕ್ರಿಶ್ಚಿಯನ್ ಅಧ್ಯಾಪಕರುಗಳು ಹಿಂದೂ ಸಂಸ್ಕೃತಿ, ತತ್ತ್ವಜ್ಞಾನವನ್ನು ಅವಹೇಳನಕಾರವಾಗಿ ಬೋಧಿಸುತ್ತಿದ್ದಂತೆಲ್ಲಾ ರಾಧಾಕೃಷ್ಣನ್‌ರಲ್ಲಿ ನಮ್ಮ ಧರ್ಮ-ಸಂಸ್ಕೃತಿಗಳ ಬಗ್ಗೆ ಆಳವಾದ ಚಿಂತನ ಅಧ್ಯಯನ ಮಾಡಬೇಕೆಂಬ ಛಲ ಹುಟ್ಟುತ್ತಿತ್ತು. ಸ್ವಾಮಿ ವಿವೇಕಾನಂದರ ಉದ್ಬೋಧಕ ಭಾಷಣಗಳು, ವಿಚಾರಗಳು ಆಗಲೇ ಬೆಳಕಿಗೆ ಬಂದಿದ್ದವಾದ್ದರಿಂದ ಅವುಗಳನ್ನು ಓದಿ, ತುಂಬಾ ಪ್ರಭಾವಿತರಾಗಿ ಹೆಚ್ಚು ಗಮನವಿಟ್ಟು ಆಳವಾದ ಚಿಂತನಕ್ಕೆ ತೊಡಗಿದರು. ತತ್ತ್ವಜ್ಞಾನ(Philosophy)ವನ್ನು ತಮ್ಮ ಮುಖ್ಯ ವಿಷಯವಾಗಿರಿಸಿಕೊಂಡು ಎಂ.ಎ. ಪದವಿಯನ್ನು ಪ್ರಥಮ ಶ್ರೇಣಿಯಲ್ಲಿ ಪ್ರಥಮವಾಗಿ ಪಾಸಾದರು.

ಆಗ ನಡೆದ ಒಂದು ಘಟನೆಯು ರೋಮಾಂಚನಕಾರಿಯಾಗಿದೆ. ಮದ್ರಾಸಿನ ಪ್ರೆಸಿಡೆನ್ಸಿ ಕಾಲೇಜಿನ ಪ್ರಿನ್ಸಿಪಾಲ್ ಹಾಬ್ಸ ಅವರು ರಾಧಾಕೃಷ್ಣನ್ ಅವರನ್ನು ತಮ್ಮ ಕೋಣೆಗೆ ಕರೆದು, 'ನೀವು ತುಂಬಾ ಬುದ್ಧಿವಂತರಿದ್ದೀರಿ, ನೀವು ಒಪ್ಪಿದರೆ ನಿಮ್ಮನ್ನು ಉನ್ನತ ಅಧ್ಯಯನಕ್ಕೆ ಇಂಗ್ಲೆಂಡಿನ ಕೆಂಬ್ರಿಜ್ ಅಥವಾ ಆಕ್ಸ್‌ಫರ್ಡಗೆ ಕಳಿಸಲು ಬ್ರಿಟಿಷ್ ಅಡಳಿತಕ್ಕೆ ಶಿಫಾರಸು ಮಾಡುತ್ತೇನೆ. ಅಲ್ಲಿ ಕಲಿತು ವಿದೇಶಿ ಪದವಿ ಗಳಿಸಿಕೊಂಡು ಬಂದರೆ, ನಿಮ್ಮ ಗೌರವ ದೇಶ ವಿದೇಶಗಳಲ್ಲಿ ಹೆಚ್ಚುತ್ತದೆ. ದಯವಿಟ್ಟು ನನ್ನ ಸಲಹೆಯನ್ನು ಒಪ್ಪಿಕೊಳ್ಳಿರಿ' ಎಂದರು.

ಆಗ ಡಾ. ರಾಧಾಕೃಷ್ಣನ್‌ರು ಸದುವಿನಯದಿಂದ ಅಷ್ಟೇ ಸ್ವಾಭಿಮಾನದಿಂದ ಹೇಳಿದರು - “Sir, thanks for your kindness, I shall go to England not to learn but to teach”.

---

೨. Confession, in Schipp Ed, Page 6.

೧೯೦೯ರಲ್ಲಿ ಡಾ.ರಾಧಾಕೃಷ್ಣನ್‌ರು ಹೇಳಿದ ಈ ದೃಢ ಸಂಕಲ್ಪದ ನುಡಿಗಳು ೧೯೨೬ರಲ್ಲಿ ಮೊದಲಬಾರಿಗೆ ಇಂಗ್ಲೆಂಡಿಗೆ ಹೋಗಿ ಕೆಂಬ್ರಿಜ್ ವಿಶ್ವವಿದ್ಯಾಲಯದಲ್ಲಿ The Hindu view of Life ಕುರಿತು ಮೂರು ಉಪನ್ಯಾಸ ನೀಡಿದಾಗ ಈಡೇರಿದ್ದನ್ನು ಕಾಣುತ್ತೇವೆ.

ತಮ್ಮಲ್ಲಿ ಹಿಂದೂ ಸಂಸ್ಕೃತಿಯ ಬಗ್ಗೆ ಅಭಿಮಾನ ಆಳವಾಗಿ ಬೇರೂರಿದ ಕುರಿತು ಡಾ|| ರಾಧಾಕೃಷ್ಣನ್‌ರು ಒಂದೆಡೆ ಹೀಗೆ ಬರೆದಿದ್ದಾರೆ- "My pride as a Hindu roused by the enterprise and eloquence of Swami Vivekananda was deeply hurt by the treatement accorded to Hinduism in missionary institutions"[೩]

ಸ್ವಾಮಿ ವಿವೇಕಾನಂದರ ಭಾರತೀಯ ಧರ್ಮ-ಸಂಸ್ಕೃತಿ ಕುರಿತಾದ ಸ್ವಾಭಿಮಾನದ ಅದ್ಭುತ ಭಾಷಣಗಳು, ಲೇಖನಗಳು ಡಾ|| ರಾಧಾಕೃಷ್ಣನ್‌ರಿಗೆ ಕಾಲೇಜು ಜೀವನದಲ್ಲಿ ತುಂಬಾ ಪರಿಣಾಮ ಬೀರಿ, ಅವರಲ್ಲಿ ಹಿಂದುತ್ವದ ಸ್ವಾಭಿಮಾನ ಕೆಚ್ಚು ಪುಟಿದೇಳುವಂತೆ ಮಾಡಿತು. ತನ್ನ ಧರ್ಮ-ಸಂಸ್ಕೃತಿಯ ಬಗ್ಗೆ ಗೌರವ-ಅಭಿಮಾನ, ಆಳವಾದ-ಅಧ್ಯಯನ ಚಿಂತನಕ್ಕೆ ತೊಡಗಿಸಿ, ನಮ್ಮ ಧರ್ಮ-ಸಂಸ್ಕೃತಿ-ತತ್ತ್ವದರ್ಶವನ್ನು ಪಾಶ್ಚಿಮಾತ್ಯರಿಗೆ ದರ್ಶನ ಮಾಡಿಸುವ ಅವಿಶ್ರಾಂತ ದುಡಿಮೆಗೆ ಪ್ರೇರೇಪಿಸಿತು. ಪೌರ್ವಾತ್ಯ ಧರ್ಮ ಸಂಸ್ಕೃತಿಯನ್ನು ಪಾಶ್ಚಿಮಾತ್ಯ ಜಗತ್ತಿಗೆ ಪರಿಚಯಿಸುವ ಮಹಾಮಣಿಹಕ್ಕೆ ಅಣಿಗೊಳಿಸಿತೆನ್ನಬಹುದು.

ಡಾ|| ರಾಧಾಕೃಷ್ಣನ್‌ರು 'Our Heritage' ಎಂಬ ಗ್ರಂಥದಲ್ಲಿ ಬರೆಯುತ್ತಾರೆ -"India has today over 500 million people practising different religions, speaking different religions, speaking different languages and of different racial Origins. The fact that such a large mass of humanity is held together in a stable administration and has preserved its administrative unity, Continuity, all these years. When round about you find smaller countries collapsing on account of their internal divisions and dissensions, is a thing that could not have been acticipated by some of our crities when the transfer of power took place.

We have here a large mass of huminity, held together not by coercion, not by dictatorship, but a democratic out look.

---

೩. "My Search for Truth" in Mc Dermott Ed. Radhakrishnan, Page 37.

# ೩. ಡಾ|| ರಾಧಾಕೃಷ್ಣನ್‌ರ ಬಾಳಿನ ಸಾಧನೆ

ಡಾ|| ರಾಧಾಕೃಷ್ಣನ್‌ರ ಬಾಳಿನ ಸಾಧನೆಯನ್ನು ಪ್ರಮುಖವಾಗಿ ಐದು ಮುಖಗಳಲ್ಲಿ (ಹಂತಗಳಲ್ಲಿ) ಅರಿತುಕೊಳ್ಳಬಹುದು.

ಅ. ಆದರ್ಶ ಶಿಕ್ಷಕ ಆ. ಶ್ರೇಷ್ಠ ಶಿಕ್ಷಣ ತಜ್ಞ ಇ. ರಾಜಕೀಯ ಮುತ್ಸದ್ಧಿ ಈ. ಆದರ್ಶ ಸದ್ಗೃಹಸ್ಥ ಉ. ವಿಶ್ವದ ಶ್ರೇಷ್ಠ ತತ್ತ್ವಜ್ಞಾನಿ.

**(ಅ) ಆದರ್ಶ ಶಿಕ್ಷಕ-ಪ್ರಾಧ್ಯಾಪಕ :**

೧೯೦೯ರಲ್ಲಿ ತಮ್ಮ ಎಂ. ಎ. ಡಿಗ್ರಿಯನ್ನು ತತ್ತ್ವಶಾಸ್ತ್ರ ವಿಷಯದಲ್ಲಿ ಮದ್ರಾಸ್ ಕ್ರಿಶ್ಚಿಯನ್ ಕಾಲೇಜಿನಿಂದ ಪಾಸಾದ ನಂತರ, ಮದ್ರಾಸಿನ ಪ್ರೆಸಿಡೆನ್ಸಿ ಕಾಲೇಜಿನ ಪ್ರಿನ್ಸಿಪಾಲ್ ಹಾಬ್ಸ ಎಂಬುವರು ಡಾ|| ರಾಧಾಕೃಷ್ಣನ್‌ರ ಪ್ರತಿಭೆಯನ್ನು ಗುರುತಿಸಿ ಅವರನ್ನು ತಮ್ಮ ಕಾಲೇಜಿನಲ್ಲಿಯೇ ಅಧ್ಯಾಪಕರನ್ನಾಗಿ (Lecturer for the Provincial Education Service) ತಿಂಗಳಿಗೆ ಒಂದು ನೂರು ರೂಪಾಯಿ ಸಂಬಳದ ಮೇಲೆ ನೇಮಿಸಿಕೊಂಡರು. ೧೯೧೧ರಲ್ಲಿ ಅಸಿಸ್ಟಂಟ್ ಪ್ರೊಫೆಸರ್ ಆಫ್ ಫಿಲಾಸಫಿ ಎಂದು ನೇಮಕಗೊಂಡರು. ತದನಂತರ ೧೯೧೬ರಲ್ಲಿ ಅದೇ ಕಾಲೇಜಿನಲ್ಲಿ ಪ್ರೊಫೆಸರ್ ಎಂದು ಬಡ್ತಿ ಹೊಂದಿದರು. ೧೯೧೭ರಲ್ಲಿ ಮದ್ರಾಸದ ರಾಜಮಹೇಂದ್ರಿ ಆರ್ಟ್ಸ್ ಕಾಲೇಜಿಗೆ ತತ್ತ್ವಶಾಸ್ತ್ರ ಪ್ರಾಧ್ಯಾಪಕರಾಗಿ ವರ್ಗಾವಣೆ ಹೊಂದಿದರು.

ವಿದ್ಯಾರ್ಥಿಜೀವನದಲ್ಲಿರುವಾಗಲೇ ಲೇಖನ-ಭಾಷಣ ಕಲೆಯಲ್ಲಿ ಹೆಸರುಗಳಿಸಿದ್ದರು. ಆಗಲೇ **"ವೇದಾಂತದಲ್ಲಿ ಆಚಾರ ನೀತಿ"** (Moral Ethics in vedanta) ಎಂಬ ಒಂದು ಸಂಶೋಧನಾತ್ಮಕ ಪ್ರಬಂಧ ಬರೆದಿದ್ದರು. ಅದು ಆಗಲೇ ದೇಶವಿದೇಶಗಳ ತತ್ತ್ವವೇತ್ತರ ಗಮನ ಸೆಳೆದು, ಅವರೆಲ್ಲ ಅದನ್ನು ಮುಕ್ತಕಂಠದಿಂದ ಹೊಗಳಿದ್ದರು.

ಡಾ|| ರಾಧಾಕೃಷ್ಣನ್‌ರ ತತ್ತ್ವಜ್ಞಾನದ ಪ್ರಭುತ್ವ ಕಂಡುಕೊಂಡಿದ್ದಂತಹ ಅದೇ ಹೊಸದಾಗಿ ಪ್ರಾರಂಭವಾಗಿದ್ದ **ಮೈಸೂರು** ವಿಶ್ವವಿದ್ಯಾಲಯದ ಉಪಕುಲಪತಿಗಳು ಇವರನ್ನು ತಮ್ಮ ವಿಶ್ವವಿದ್ಯಾಲಯದ **ತತ್ತ್ವಜ್ಞಾನ ವಿಭಾಗಕ್ಕೆ ಪ್ರಾಧ್ಯಾಪಕರನ್ನಾಗಿ** ನೇಮಿಸಿಕೊಂಡರು. ೧೯೧೮ ರಿಂದ ೧೯೨೧ವರೆಗೆ ಮೂರು

ವರುಷಗಳ ಕಾಲವು ಅವರ ಬಾಳಿಗೆ ಬೆಳಕನಿತ್ತ ಅವರ ಸಾಧನೆಗೆ ಒಂದು ರೂಪುಕೊಟ್ಟ, ಅವರ ಪ್ರತಿಭೆಯನ್ನು ವಿಶ್ವಕ್ಕೆ ಪರಿಚಯಿಸಿದ ಕಾಲವೆನ್ನಬಹುದು.

೧೯೧೮ರಲ್ಲಿ **"ರವೀಂದ್ರನಾಥ ಟ್ಯಾಗೋರ್ ದರ್ಶನ** (The Philosophy of Rabindranath Tagore)" ಎಂಬ ಕೃತಿಯನ್ನು ಬರೆದು ಲಂಡನ್ನಿನಿಂದ ಪ್ರಕಟಿಸಿದರು. ಟ್ಯಾಗೋರರ ಜೀವನ-ತತ್ತ್ವದರ್ಶನವನ್ನು ದೇಶವಿದೇಶಗಳಿಗೆಲ್ಲಾ ತಮ್ಮ ಸುಂದರವಾದ ಇಂಗ್ಲೀಷ ಭಾಷೆಯಲ್ಲಿ ಪರಿಚಯಿಸಿದರು. ಸ್ವತಃ ವಿಶ್ವಕವಿ ರವಿಂದ್ರನಾಥ ಟ್ಯಾಗೋರ್ ಅವರೇ ಈ ಕೃತಿಯನ್ನು ಮೆಚ್ಚಿಕೊಂಡಿದ್ದರು.

೧೯೨೦ ರಲ್ಲಿ **"ಸಮಕಾಲೀನ ದರ್ಶನಗಳಲ್ಲಿ ಧರ್ಮದ ಪ್ರಭುತ್ವ"** (The Reign of Religion in Contemporary Philosophy) ಎಂಬ ಕೃತಿಯನ್ನು ಲಂಡನ್‌ದಿಂದಲೇ ಪ್ರಕಟಿಸಿದರು. ಈ ಗ್ರಂಥವು ಅಂದಿನ ದಾರ್ಶನಿಕ ಜಗತ್ತಿನಲ್ಲಿ ಹೊಸ ವಿಚಾರಗಳ ತರಂಗಗಳನ್ನೇ ಎಬ್ಬಿಸಿತು. ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ದೇಶಗಳ ತತ್ತ್ವಜಿಜ್ಞಾಸೆಯ ವಿದ್ವಾಂಸರುಗಳ ಗಮನವನ್ನು ಸೆಳೆದುಕೊಂಡುದಲ್ಲದೇ, ಡಾ|| ರಾಧಾಕೃಷ್ಣನ್‌ರ ವಿದ್ವತ್ತತೆಯ ಸ್ಪಷ್ಟ ಮುದ್ರೆಯನ್ನೇ ಮೂಡಿಸಿತು. ದೇಶ-ವಿದೇಶಗಳಲ್ಲೆಲ್ಲ ಅವರ ಬಗ್ಗೆ ಪ್ರಶಂಸೆ ಕೇಳಿ ಬಂದಾಗ ಮೈಸೂರಿನ ಮನೆ-ಮನೆಗೆ, ಸಂದಿ-ಗೊಂದಿಗಳಿಗೂ ಅವರ ಹೆಸರು ತಲುಪಿತು. ಜನ ಅವರನ್ನು ನೋಡಲು, ಅವರ ಉಪನ್ಯಾಸಗಳನ್ನು ಕೇಳಲು ಪುಷ್ಪಕ್ಕೆ ದುಂಬಿಗಳು ಮುಕುರುವಂತೆ ಸೇರತೊಡಗಿದರು.

೧೯೨೧ರಲ್ಲಿ ಡಾ. ರಾಧಾಕೃಷ್ಣನ್‌ರು ಕಲಕತ್ತಾ ವಿಶ್ವವಿದ್ಯಾಲಯಕ್ಕೆ ಹೋಗಬೇಕಾದ ಪ್ರಸಂಗ ಒದಗಿ ಬಂದಿತು. ಆಗ ಅವರನ್ನು ಬೀಳ್ಕೊಡಲು ಅವರ ನೂರಾರು ವಿದ್ಯಾರ್ಥಿಗಳು, ಸಾವಿರಾರು ಅಭಿಮಾನಿಗಳು ನೆರೆದಿದ್ದರು. ಸಭಾಭವನದಿಂದ ರೈಲು ನಿಲ್ದಾಣದವರೆಗೆ ಕುದುರೆ ಸಾರೋಟನ್ನು ಶೃಂಗರಿಸಿ ಅದರ ಮೇಲೆ ಅವರನ್ನು ಕೂಡಿಸಿ ಮೆರವಣಿಗೆ ನಡೆಸಿದರು. ಕುದುರೆಗಳನ್ನು ಬಿಚ್ಚಿ ಸ್ವತಃ ವಿದ್ಯಾರ್ಥಿಗಳೇ ಸಾರೋಟ (ರಥ) ವನ್ನು ಹೆಗಲು ಕೊಟ್ಟು ಎಳೆದುಕೊಂಡು ನಡೆದರು. ಹೀಗೆ ಸ್ವಲ್ಪೇ ಸಮಯದಲ್ಲಿ ಅವರು ವಿದ್ಯಾರ್ಥಿಗಳ ಪ್ರೀತಿಯ ಗುರುವಾಗಿದ್ದರು ಹಾಗೂ ಜನ ಮೆಚ್ಚಿದ ಆದರ್ಶ ಶಿಕ್ಷಕರಾಗಿದ್ದರೆಂಬುದನ್ನು ಕಾಣುತ್ತೇವೆ.

ಇದೇ ಕಾಲಕ್ಕೆ ಡಾ||ರಾಧಾಕೃಷ್ಣನ್ನರ ತತ್ತ್ವಶಾಸ್ತ್ರ-ಪಾಂಡಿತ್ಯ-ಪ್ರತಿಭೆಯನ್ನರಿತ ಅಂದಿನ ಸುಪ್ರಸಿದ್ಧ ವಿದ್ವಾಂಸರೂ ಆಗಿದ್ದ, ಕಲಕತ್ತಾ ವಿಶ್ವವಿದ್ಯಾಲಯದ ಉಪಕುಲಪತಿ ಸರ್ ಅಶುತೋಶ್ ಮುಖರ್ಜಿಯವರು ಡಾ|| ರಾಧಾಕೃಷ್ಣನ್‌ರನ್ನು ೧೯೨೧ರಲ್ಲಿ ಕಲಕತ್ತಾ ವಿಶ್ವವಿದ್ಯಾಲಯದಲ್ಲಿ ಸ್ಥಾಪಿತವಾದ ದರ್ಶನಶಾಸ್ತ್ರ ಕುರಿತಾದ

- **"ಕಿಂಗ್ ಜಾರ್ಜ ಪಂಚಮ ಮನೋವಿಜ್ಞಾನ ಮತ್ತು ಆಧ್ಯಾತ್ಮ ವಿದ್ಯಾಪೀಠಕ್ಕೆ "** (King George V Chair of Mental and Moral Science) ಮುಖ್ಯಸ್ಥರನ್ನಾಗಿ ನೇಮಿಸಿಕೊಂಡರು. ಈ ವಿಶ್ವವಿದ್ಯಾಲಯದಲ್ಲಿ ಡಾ|| ರಾಧಾಕೃಷ್ಣನ್‌ರು ೧೯೨೧ರಿಂದ ೧೯೩೧ ವರೆಗೆ ಮತ್ತು ೧೯೩೭ ರಿಂದ ೧೯೪೧ವರೆಗೆ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು.

ಕಲಕತ್ತಾ ವಿಶ್ವವಿದ್ಯಾಲಯಕ್ಕೆ ಬಂದ ಮೊದಲ ವರ್ಷದಲ್ಲಿಯೇ (೧೯೨೧ರಲ್ಲಿ) ಡಾ|| ರಾಧಾಕೃಷ್ಣನ್‌ರು **"ಭಾರತೀಯ ತತ್ತ್ವಶಾಸ್ತ್ರ" ಭಾಗ-೧** (Indian Philosophy Vol-I) ಬರೆದು ಪ್ರಕಟಣೆಗಾಗಿ ಲಂಡನ್ನಿಗೆ ಕಳಿಸಿದರು. ಅದು ೧೯೨೩ರಲ್ಲಿ ಪ್ರಕಟವಾಗಿ ದೇಶ-ವಿದೇಶಗಳಲ್ಲೆಲ್ಲಾ ಭಾರೀ ಜನಪ್ರಿಯತೆಯನ್ನು ಗಳಿಸಿತು. ತಮ್ಮ ಜೀವನದ ೩೪ನೇ ವಯಸ್ಸಿನಲ್ಲಿಯೇ ಅವರು ಭಾರತದ ಶ್ರೇಷ್ಠ ತತ್ತ್ವಜ್ಞಾನಿಯೆಂದು ಪರಿಗಣಿಸಲ್ಪಡತೊಡಗಿದರು. ಇದಾದ ನಂತರ **ಭಾರತೀಯ ತತ್ತ್ವಶಾಸ್ತ್ರ ಭಾಗ-೨** (Indian Philosophy Vol-II) ಕೂಡ ಲಂಡನ್ನಿನಿಂದಲೇ ಪ್ರಕಾಶನವಾಯಿತು.

ಇಂಡಿಯನ್ ಫಿಲಾಸಫಿಯ ಈ ಎರಡು ಬೃಹತ್ ಗ್ರಂಥಗಳು ಅವರನ್ನು ಪ್ರಪಂಚದ ಶ್ರೇಷ್ಠ ತತ್ತ್ವಜ್ಞಾನಿಯನ್ನಾಗಿ ರೂಪುಗೊಳಿಸಿದವೆನ್ನಬಹುದು. ಡಾ|| ರಾಧಾಕೃಷ್ಣನ್‌ರು ಬರೆದ ಹಲವಾರು ಲೇಖನಗಳು (articles) ಹಿಬ್ಬರ್ಟ ಜರ್ನಲ್ (Hibbert Journal) ದಲ್ಲಿ ಪ್ರಿಂಟಾದುದನ್ನು ಓದಿದ ಅದರ ಸಂಪಾದಕ, ಆಕ್ಸಫರ್ಡ್ ಮ್ಯಾಂಚೆಸ್ಟರ್ ಕಾಲೇಜಿನ ನಿ. ಪ್ರಿನ್ಸಿಪಾಲ **ಡಾ|| ಎಲ್.ಪಿ. ಜಾಕ್ಸ್** ಅವರು ಡಾ|| ಎಸ್. ರಾಧಾಕೃಷ್ಣನ್‌ರನ್ನು "Upton Lectures on The Hindu View of Life" ಕುರಿತು **(ಜೀವನದ ಬಗ್ಗೆ ಹಿಂದುವಿನ ದೃಷ್ಟಿಕೋನ)** ಉಪನ್ಯಾಸ ನೀಡಲು ೧೯೨೬ರಲ್ಲಿ ಆವ್ಹಾನಿಸಿದರು. ಅದೇ ರೀತಿಯಾಗಿ ೧೯೨೬ರಲ್ಲಿ ಬ್ರಿಟಿಶ್ ಸಾಮ್ರಾಜ್ಯದ ಅಧೀನದೊಳಗಿರುವ ವಿಶ್ವವಿದ್ಯಾಲಯಗಳ ಒಂದು ಸಮ್ಮೇಳನವು **ಇಂಗ್ಲೆಂಡ್‌ದ ಕೆಂಬ್ರಿಜ್ ವಿಶ್ವವಿದ್ಯಾಲಯದಲ್ಲಿ** ಜರುಗಿಸುವ ನಿರ್ಧಾರ ಕೈಗೊಂಡಿತು. ಈ ಎರಡೂ ಆಮಂತ್ರಣವನ್ನು ಡಾ|| ರಾಧಾಕೃಷ್ಣನ್ನರು ಒಪ್ಪಿಕೊಂಡರು. ಕಲ್ಕತ್ತಾ ವಿಶ್ವವಿದ್ಯಾಲಯವು ಇವರನ್ನು ಒಳ್ಳೆಯ ಗೌರವಾದರಗಳಿಂದ ತನ್ನ ಪ್ರತಿನಿಧಿಯೆಂದು ಕಳಿಸಿಕೊಟ್ಟಿತು.

ಇದು ಡಾ|| ರಾಧಾಕೃಷ್ಣನ್‌ರು ತಮ್ಮ ಬಾಳಿನಲ್ಲಿ ಮಾಡಿದ ಪ್ರಥಮ ವಿದೇಶ ಪ್ರವಾಸವಾಯಿತು. ಈ ಪ್ರವಾಸದಲ್ಲಿ ಅವರು ನೀಡಿದ ಅಪ್ಟಾನ್ ಉಪನ್ಯಾಸಗಳು "The Hindu View of Life" **(ಹಿಂದುವಿನ ಜೀವನದೃಷ್ಟಿ)**. ಎಂಬ ಗ್ರಂಥ

ರೂಪದಲ್ಲಿ ೧೯೨೭ರಲ್ಲಿ ಲಂಡನ್ನಿನಿಂದ ಪ್ರಕಟಗೊಂಡವು. ಅನಂತರ ಜೂನ್ ೧೯೨೬ರಲ್ಲಿ Congress of The Universities of the British Empire ಸಭೆಯಲ್ಲಿಯೂ ಉಪನ್ಯಾಸ ಮಾಡಿದರು. ತದನಂತರ ಸಪ್ಟೆಂಬರ್ ೧೯೨೬ರಲ್ಲಿಯೇ ಹಾರ್ವರ್ಡ್ ವಿಶ್ವವಿದ್ಯಾಲಯುದಲ್ಲಿ International Congress of Philosophy (ಅಂತರ್ರಾಷ್ಟ್ರೀಯ ತತ್ತ್ವಜ್ಞಾನ ಸಮ್ಮೇಲನ)ದಲ್ಲಿ ಉಪನ್ಯಾಸ ನೀಡಿದರು. ನಾಗರಿಕತೆಯ ಭವಿಷ್ಯ ಸ್ಥಿತಿ (Kalki or The Future of civilization) ಎಂದು ಉಪನ್ಯಾಸ ನೀಡಿದರು. ಅದು ೧೯೨೯ರಲ್ಲಿ ಪ್ರಕಟವಾಯಿತು. ಕೆಂಬ್ರಿಜ್‌ನ ಅಂತರ್ರಾಷ್ಟ್ರೀಯ ತತ್ತ್ವಜ್ಞಾನಿಗಳ ಸಭೆಯಲ್ಲಿ "The Doctorine of Maya some problems" (ಮಾಯಾವಾದ ಕುರಿತು ಕೆಲವು ಸಮಸ್ಯೆಗಳು) ಕುರಿತು ಉಪನ್ಯಾಸ ನೀಡಿದರು.

ಅನಂತರ ಅಮೇರಿಕೆಯ ಚಿಕ್ಯಾಗೋ ವಿಶ್ವವಿದ್ಯಾಲಯುದಲ್ಲಿ Haskell Lectures in Comparative Religions" (ಧರ್ಮಗಳ ತೌಲನಿಕತೆ) ಕುರಿತು ಉಪನ್ಯಾಸಗಳನ್ನು ನೀಡಿದರು.

ಇದಾದ ನಂತರ ಭಾರತಕ್ಕೆ ಮರಳಿ ಬಂದು ಭಾರತೀಯ ತತ್ತ್ವಶಾಸ್ತ್ರ ಸಭೆಯ ಆಡಳಿತಾಧಿಕಾರಿ ಎಂದು ಕಾರ್ಯನಿರ್ವಹಿಸಿದರು. (೧೯೨೫-೩೭ವರೆಗೆ) ಮುಂಬಯಿಯಲ್ಲಿ ಜರುಗಿದ ಮೂರನೇ ತತ್ತ್ವಜ್ಞಾನ ಸಮ್ಮೇಲನದ ಅಧ್ಯಕ್ಷತೆ ವಹಿಸಿದರು.

೧೯೨೯ ರಲ್ಲಿ ಮತ್ತೆ ಲಂಡನ್ ವಿಶ್ವವಿದ್ಯಾಲಯಗಳು ಮ್ಯಾಂಚೇಸ್ಟರ್‌ಲ್ಲಿ Habbert Lectures "An Idealistic View of Life" (ಜೀವನದ ಆದರ್ಶ ದೃಷ್ಟಿಕೋನ) ಕುರಿತು ಉಪನ್ಯಾಸಗಳನ್ನು ನೀಡಿದರು. ಅದೂ ಕೂಡ ಗ್ರಂಥ ರೂಪದಲ್ಲಿ ಪ್ರಕಟವಾಯಿತು.

೧೯೩೧ರಲ್ಲಿ ಕಿಂಗ್ ಜಾರ್ಜ ಇವರಿಂದ ಸರ್ ಎಂಬ ಗೌರವದೊಂದಿಗೆ ಸನ್ಮಾನಿತರಾದರು. ಅಲ್ಲಿಂದ ಮರಳಿ ಬಂದ ನಂತರ ೧೯೩೧ರಿಂದ ೧೯೩೬ವರೆಗೆ ಆಂಧ್ರ ಯುನಿವರ್ಸಿಟಿ ವಾಲ್ಟೇರದಲ್ಲಿ ಉಪಕುಲಪತಿಯಾಗಿ ನೇಮಕಗೊಂಡು ಕಾರ್ಯನಿರ್ವಹಿಸಿದರು.

೧೯೩೬ರಲ್ಲಿ ಆಕ್ಸಫರ್ಡ ವಿಶ್ವವಿದ್ಯಾಲಯುವು "Estern Religion and Ethics" (ಪೌರ್ವಾತ್ಯ ಧರ್ಮ ಮತ್ತು ನೀತಿ ಶಾಸ್ತ್ರ)ವಿಷಯಕ್ಕೆ spalding professor ಎಂದು ನೇಮಣೂಕಿ ಮಾಡಿಕೊಂಡಿತು. ಇದೇ ಕಾಲಕ್ಕೆ ಕಲಕತ್ತಾ ವಿಶ್ವವಿದ್ಯಾಲಯದ ತಮ್ಮ ಮೊದಲಿನ ಹುದ್ದೆಯಲ್ಲಿಯೂ ಅವರು ಸೇವೆಗೈದರು.

೧೯೩೬ ರಿಂದ ೩೮ರವರೆಗಿನ ಅವಧಿಯಲ್ಲಿ ಡಾ|| ರಾಧಾಕೃಷ್ಣನ್‌ರು ಮಾಡಿದ ಉಪನ್ಯಾಸಗಳು **"ಪೌರ್ವಾತ್ಯ ಧರ್ಮಗಳು ಮತ್ತು ಪಾಶ್ಚಿಮಾತ್ಯ ವಿಚಾರಧಾರೆ"** (Estern Religions and Western Thought) ಎಂಬ ಗ್ರಂಥದಲ್ಲಿ ಪ್ರಕಟವಾದವು.

೧೯೩೯ರಲ್ಲಿ ಎರಡನೆ ಜಾಗತಿಕ ಯುದ್ಧ ಪ್ರಾರಂಭವಾದ್ದರಿಂದ ಡಾ|| ರಾಧಾಕೃಷ್ಣನ್‌ರು ಇಂಗ್ಲೆಂಡಿಗೆ ಹೋಗುವುದನ್ನು ನಿಲ್ಲಿಸಿದರು. ಆಗ ಅವರು ೧೯೩೯ ರಲ್ಲಿ ಶ್ರೀಸನ್‌ಮಾನ್ಯ ಮದನ ನೋಹನ ಮಾಲವಿಯರು ವಿನಂತಿಸಿದಂತೆ **ಬನಾರಸ ಹಿಂದು ವಿಶ್ವವಿದ್ಯಾಲಯದ ಉಪಕುಲಪತಿಯಾಗಿ** ಅಧಿಕಾರ ಸ್ವೀಕರಿಸಿದರು. ೧೯೪೧ ರಲ್ಲಿ "ಸರ್ ಸಯಾಜಿರಾವ್ ಗಾಯಕವಾಡ ಚೇರ್ ಇನ್ ಇಂಡಿಯನ್‌ಕಲ್ಚರ್ ಆಂಡ ಸಿವಿಲಿಜೇಶನ್" ಎಂಬ ಪೀಠದ ಅಧಿಕಾರವನ್ನು ಬನಾರಸ್ ವಿಶ್ವವಿದ್ಯಾಲಯದಲ್ಲಿಯೇ ವಹಿಸಿಕೊಂಡು ಬೋಧನೆಯ ಕಾರ್ಯವನ್ನು ನಿರ್ವಹಿಸಿದರು.

೧೯೫೨ರಲ್ಲಿ ಮತ್ತೆ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ಸಂದರ್ಶಕ ಪ್ರಾಧ್ಯಾಪಕರೆಂದು ನಿಯೋಜಿಸಲ್ಪಟ್ಟು ಕಾರ್ಯ ಮಾಡಿದರು. ಪ್ರಪಂಚದ ೫೦ ಕ್ಕೂ ಮಿಕ್ಕಿ ವಿಶ್ವವಿದ್ಯಾಲಯಗಳಿಗೆ **ಸಂದರ್ಶಕ ಪ್ರಾಧ್ಯಾಪಕರೆಂದು** ಗೌರವಿಸಲ್ಪಟ್ಟರಲ್ಲದೇ, ದೇಶದ ಘನತೆಯನ್ನು ಜಾಗತಿಕ ಮಟ್ಟದಲ್ಲಿ ಹೆಚ್ಚಿಸಿದರು.

ಈ ರೀತಿಯಾಗಿ ಡಾ||ಎಸ್. ರಾಧಾಕೃಷ್ಣನ್‌ರು ೧೯೦೯ರಿಂದ ೧೯೫೨ವರೆಗೆ ಶಿಕ್ಷಣ ವೃತ್ತಿಯ ವಿವಿಧ ಹುದ್ದೆಗಳನ್ನು ಅಲಂಕರಿಸಿ, ಒಳ್ಳೆಯ ಶಿಕ್ಷಕರಾಗಿ ಧಾರ್ಮಿಕ -ನೈತಿಕ ಶಿಕ್ಷಣವನ್ನು ಕಲಿಸಿದರು. ವಿಶ್ವದ ಶ್ರೇಷ್ಠ ಆದರ್ಶ ಶಿಕ್ಷಕರೆಂಬ ಗೌರವವನ್ನು ಗಳಿಸಿದರು. ೧೯೫೪ರಲ್ಲಿ ಭಾರತಸರಕಾರವು **ಭಾರತ ರತ್ನ** ಪ್ರಶಸ್ತಿ ನೀಡಿ ಗೌರವಿಸಿತು.

**(ಆ) ಶ್ರೇಷ್ಠ ಶಿಕ್ಷಣ ತಜ್ಞ:**

ಡಾ|| ಎಸ್. ರಾಧಾಕೃಷ್ಣನ್ನರು ಕೇವಲ ತತ್ತ್ವಜ್ಞಾನ ಪ್ರಾಧ್ಯಾಪಕರಾಗಿ ಬೋಧನೆ ಮಾಡದೇ ದೇಶ ವಿದೇಶಗಳಲ್ಲಿ ಶಿಕ್ಷಣ ನೀತಿಯನ್ನು ರೂಪಿಸಿದವರು. ಕ್ರಿಶ್ಚಿಯನ್ ಮಿಶನರಿ ಶಾಲೆ-ಕಾಲೇಜುಗಳಲ್ಲಿ ಕಲಿತುದರಿಂದ ಆಯಾ ಸಂಸ್ಥೆಗಳ ಶಿಕ್ಷಣಮಟ್ಟ, ವಿದ್ಯಾರ್ಥಿ-ಶಿಕ್ಷಕರ ಬಾಂಧವ್ಯ, ಕಾಲೇಜು -ವಿಶ್ವ ವಿದ್ಯಾಯಲಗಳ ಶಿಕ್ಷಣದ ರೀತಿ ನೀತಿ ಸಂಪೂರ್ಣ ಅರಿತವರಾಗಿದ್ದರು.

೧೯೩೧ ರಿಂದ ೧೯೩೬ವರೆಗೆ ಆಂಧ್ರ ಯುನಿವರ್ಸಿಟಿ ವಾಲ್ಟೇರದಲ್ಲಿ ಉಪಕುಲಪತಿ (ವೈಸ್ ಛಾನ್ಸಲರ್)ಯಾಗಿ ಆ ಯುನಿವರ್ಸಿಟಿ ಯನ್ನು ಸರ್ವಾಂಗ

ಸುಂದರವಾಗಿ ರೂಪಿಸಿದರು. ಇದೇ ಸಮಯದಲ್ಲಿ (೧೯೩೧ ರಿಂದ ೩೬) "International Committee on Intelectual co-operation of the League of Nations" ಸಮಿತಿಗೆ ಸದಸ್ಯರಾಗಿದ್ದುದರಿಂದ ಇಡೀ ಭಾರತದಾದ್ಯಂತ ಹಲವಾರು ವಿಶ್ವವಿದ್ಯಾಲಯಗಳಲ್ಲಿ ಕಾನ್ವೋಕೇಶನ್ ಉಪನ್ಯಾಸಗಳನ್ನೂ ನೀಡಿದರು. ಅವು **ಸ್ವಾತಂತ್ರ್ಯ ಮತ್ತು ಸಂಸ್ಕೃತಿ** (Freedom and culture) ಎಂಬ ಕೃತಿಯ ರೂಪದಲ್ಲಿ ಪ್ರಕಟಗೊಂಡಿವೆ. ಇದಲ್ಲದೇ The Heart of Hindustan (**ಭಾರತದ ಹೃದಯ**) ಎಂಬ ಕೃತಿಯನ್ನು ಪ್ರಕಟಿಸಿದರು.

೧೯೩೯-೪೮ವರೆಗೆ ಕಾಶಿಯ "ಬನಾರಸ್ ಹಿಂದೂ ವಿಶ್ವವಿದ್ಯಾಲಯದ ಉಪಕುಲಪತಿ"ಯಾಗಿಯೂ ಕಾರ್ಯನಿರ್ವಹಿಸಿದರು. ಹಲವಾರು ಉಪನ್ಯಾಸಗಳು ಶಿಕ್ಷಣ-ನೀತಿ-ಸಮಾಜ ಕುರಿತು ನೀಡಿದ್ದು. ಅವು Religion and Society (**ಧರ್ಮ ಮತ್ತು ಸಮಾಜ**) ಎಂದು ಗ್ರಂಥರೂಪದಲ್ಲಿ ಪ್ರಕಟವಾಗಿವೆ.

೧೯೩೭ರಿಂದ ೪೪ವರೆಗಿನ ಅವಧಿಯಲ್ಲಿ ಅವರು ಬರೆದ ಲೇಖನಗಳು, ಉಪನ್ಯಾಸಗಳು 'Education politics and war' (**ಶಿಕ್ಷಣ ರಾಜಕಾರಣ ಮತ್ತು ಯುದ್ಧ**) ಎಂಬ ಕೃತಿಯಲ್ಲಿ ಪ್ರಕಟವಾಗಿವೆ.

೧೯೪೪ರಲ್ಲಿ ಡಾ. ರಾಧಾಕೃಷ್ಣನ್‌ರು **ಚೀನಾ ದೇಶಕ್ಕೆ** ಹೋಗಿ ಅಲ್ಲಿ ಚೀನದ ಬೌದ್ಧಧರ್ಮ, ತಾವೋ ಧರ್ಮ, ಕನ್‌ಫ್ಯೂಶಿಯಸ್ ಧರ್ಮ ಕುರಿತು, ಉಪನ್ಯಾಸ ನೀಡಿದರು. ಆ ಉಪನ್ಯಾಸಗಳು India and China (**ಭಾರತ ಮತ್ತು ಚೀನಾ**)ಎಂಬ ಕೃತಿಯಲ್ಲಿ ಪ್ರಕಟವಾಗಿವೆ.

ದ್ವಿತೀಯ ಮಹಾಯುದ್ಧದ ತರುವಾಯ UNESCO ದಲ್ಲಿ ೧೯೪೭ರಿಂದ ೫೦ ವರೆಗೆ ಭಾರತದ ಪ್ರತಿನಿಧಿಯಾಗಿ ಕಾರ್ಯನಿರ್ವಹಿಸಿದುದಲ್ಲದೇ ಅಮೇರಿಕೆಯ ಹದಿನಾಲ್ಕು ವಿಶ್ವವಿದ್ಯಾಲಯಗಳಲ್ಲಿ ಉಪನ್ಯಾಸ ನೀಡಿದರು. League of Nations ಮತ್ತು United Nations Organisation ಸಂಸ್ಥೆಗಳಲ್ಲಿಯೂ ಶಿಕ್ಷಣತಜ್ಞರಾಗಿ ಸಲಹೆ -ಸೂಚನೆ ನೀಡಿ, ವಿಶ್ವದ ರಾಷ್ಟ್ರಗಳಿಗೆ ಶಿಕ್ಷಣ ರೂಪಿಸುವಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ.

ಭಾರತವು ೧೯೪೭ರಲ್ಲಿ ಸ್ವತಂತ್ರಗೊಂಡ ತರುವಾಯ, ೧೯೪೮-೪೯ ರಲ್ಲಿ ಭಾರತ ಸರಕಾರದ ಯುನಿವರ್ಸಿಟಿ ಕಮೀಶನ್‌ದ ಮುಖ್ಯಸ್ಥರಾಗಿ ೧೯೫೩ ರಿಂದ ೬೨ವರೆಗೆ ದಿಲ್ಲಿ ವಿಶ್ವವಿದ್ಯಾಲಯದ ಕುಲಪತಿಗಳಾಗಿಯೂ ಕಾರ್ಯನಿರ್ವಹಿಸಿದ್ದಾರೆ.

ಡಾ|| ರಾಧಾಕೃಷ್ಣನ್‌ರು ಈ ರೀತಿ ಶಿಕ್ಷಣತಜ್ಞರಾಗಿ, ಉನ್ನತ ಶಿಕ್ಷಣಕ್ಕೆ ಸಲ್ಲಿಸಿದ ಸೇವೆಯು ಸ್ಮರಣೀಯವಾಗಿದೆ. ಉನ್ನತ ಶಿಕ್ಷಣ ಕುರಿತು ಹಲವಾರು ಉಪನ್ಯಾಸ, ಲೇಖನಗಳನ್ನೂ ಬರೆದಿರುವರು. ಆ ವಿಚಾರವಾಗಿಯೂ ಇದೇ ಗ್ರಂಥದಲ್ಲಿ ಮುಂದೆ ವಿವರಿಸಲಾಗಿದೆ.

## (೩) ರಾಜಕೀಯ ಮುತ್ಸದ್ದಿ :

ಡಾ|| ಎಸ್. ರಾಧಾಕೃಷ್ಣನ್‌ರು ರಾಜಕಾರಣವನ್ನಾಗಲೀ, ರಾಜಕೀಯ ಅಧಿಕಾರವನ್ನಾಗಲಿ ಹುಡುಕಿಕೊಂಡು, ಬೆನ್ನುಹತ್ತಿ ಹೋದವರಲ್ಲ. ರಾಜಕೀಯ ತಜ್ಞರೊಬ್ಬರು ನುಡಿದಿರುವಂತೆ A Polotician has an eye on election, But a statesman has an eye on generation. ರಾಜಕಾರಣಿಗೆ ಚುನಾವಣೆಯ ಮೇಲೆ, ಅಧಿಕಾರದ ಮೇಲೆ ಕಣ್ಣಿದ್ದರೆ, ರಾಜಕಾರಣ ಮುತ್ಸದ್ದಿಗೆ ಇಡೀ ಜನಾಂಗದ ಏಳ್ಗೆಯ ಕುರಿತು ದೃಷ್ಟಿ ಇರುತ್ತದೆ. ಡಾ|| ರಾಧಾಕೃಷ್ಣನ್‌ರು ರಾಜಕಾರಣ ಮುತ್ಸದ್ದಿಯಾಗಿದ್ದರು. ರಾಜಕೀಯವನ್ನು ಧರ್ಮ-ನೀತಿ-ಸಂಸ್ಕೃತಿಯ ತಳಹದಿಯ ಮೇಲೆ ರೂಪಿಸಬೇಕು ಎಂಬ ವಿಚಾರಗಳನ್ನು ಪ್ರತಿಪಾದಿಸಿದರು.

೧೯೪೭ರಿಂದ ೪೯ವರೆಗೆ ಭಾರತ ಸಂವಿಧಾನ ಸಭೆಯ ಸದಸ್ಯರಾಗಿ ಸೇವೆ ಸಲ್ಲಿಸಿದರು. ೧೯೪೯ರಲ್ಲಿ ಅಂದಿನ ಭಾರತದ ಪ್ರಧಾನಮಂತ್ರಿ ಪಂಡಿತ್ ಜವಾಹರಲಾಲ ನೆಹರು ಅವರು ಡಾ|| ರಾಧಾಕೃಷ್ಣನ್‌ರನ್ನು **ಭಾರತದ ಪ್ರಥಮ ರಾಯಭಾರಿಯನ್ನಾಗಿ** (India's First Ambassador) ರಶಿಯಾ (USSR) ದೇಶಕ್ಕೆ ಕಳುಹಿಸಿದರು. ೧೯೪೯ ರಿಂದ ೧೯೫೨ ಏಪ್ರಿಲ್ ೧೮ವರೆಗೆ ಕಮ್ಯುನಿಷ್ಟ ದೇಶವಾದ ರಶಿಯಾದಲ್ಲಿ ರಾಯಭಾರಿಯಾಗಿ ಸಲ್ಲಿಸಿದ ಸೇವೆ ಅನುಪಮವಾದುದು. ಆಗ ಕಾಮ್ರೇಡ್ ಸ್ಟಾಲಿನ್ ರಶಿಯಾ ದೇಶದ ಸರ್ವೋನ್ನತ ಸರ್ವಾಧಿಕಾರಿಯಾಗಿದ್ದರು. ಅವರನ್ನು ಕಂಡರೆ ವಿಶ್ವವೇ ನಡುಗುತ್ತಿತ್ತು. ಅಂತಹ ವ್ಯಕ್ತಿಯ ಮೇಲೆಯೂ ಕೂಡಾ ಡಾ|| ರಾಧಾಕೃಷ್ಣನ್ನರು ತಮ್ಮ ಸಾತ್ವಿಕ ಜೀವನ, ಉನ್ನತ ವಿಚಾರಗಳು, ವಿದ್ವತ್ಪೂರ್ಣ ವ್ಯಕ್ತಿತ್ವದ ಪ್ರಭಾವ ಬೀರಿದರು. ಆತನನ್ನು ಮಾನವೀಯ ದೃಷ್ಟಿಯಿಂದ ಕಂಡು ಆತನ ಹೃದಯ ಪರಿವರ್ತನೆಯಾಗುವಂತೆ ಮಾಡಿದರು. ಸ್ವತಃ ಸ್ಟಾಲಿನ್ ಡಾ|| ರಾಧಾಕೃಷ್ಣನ್‌ರಿಗೆ "You are the first person to treat me as a human being not as a monster" ಎಂದನಂತೆ.

೧೯೫೨ ಏಪ್ರಿಲ್ ೧೮ ರಂದು ಪಂ. ಜವಾಹರಲಾಲ ನೆಹರೂ ಅವರ ಇಚ್ಛೆಯಂತೆ ರಶಿಯಾದ ರಾಯಭಾರಿ ಹುದ್ದೆಗೆ ರಾಜೀನಾಮೆ ಇತ್ತು, ಅಂದಿನ ಕಾಂಗ್ರೆಸ್ ಪಕ್ಷದ ಅಭ್ಯರ್ಥಿಯಾಗಿ, ೧೯೫೨ ರಿಂದ ೧೯೬೨ವರೆಗೆ ಎರಡು ಅವಧಿಗಳ ಕಾಲ ಭಾರತದ ಉಪರಾಷ್ಟ್ರಪತಿಯಾಗಿ ರಾಜಕೀಯದಲ್ಲಿ ಸೇವೆ ಸಲ್ಲಿಸಿದರು. ಗಣತಂತ್ರ **ಭಾರತದ ಪ್ರಥಮ ಉಪರಾಷ್ಟ್ರಪತಿಯೆಂಬ** ಕೀರ್ತಿಗೂ ಪಾತ್ರರಾದರು.

ರಾಜಕೀಯದಲ್ಲಿದ್ದರೂ ತಮ್ಮ ತತ್ತ್ವಚಿಂತನವನ್ನು ತ್ಯಜಿಸಿಲ್ಲ. ಇದೇ ಅವಧಿಯಲ್ಲಿ ಪ್ರಮುಖ ಉಪನಿಷತ್ತುಗಳನ್ನು ಇಂಗ್ಲೀಷಿಗೆ ಅನುವಾದಿಸಿ

ಅರ್ಥಬರೆದು "The Principal Upanishads" (ಪ್ರಮುಖ ಉಪನಿಷತ್ತುಗಳು) ಎಂಬ ಕೃತಿಯನ್ನು ಮತ್ತು The Brahma Sutra (ಬ್ರಹ್ಮಸೂತ್ರ) ಎಂಬ ಅನುವಾದಿತ ಕೃತಿಯನ್ನು ಪ್ರಕಟಿಸಿದರು.

ಭಾರತದ ಪ್ರಥಮ ರಾಷ್ಟ್ರಪತಿ ಡಾ|| ಬಾಬುರಾಜೇಂದ್ರ ಪ್ರಸಾದರು ೧೯೬೨ರಲ್ಲಿ ರಾಷ್ಟ್ರಪತಿ ಹುದ್ದೆಯನ್ನು ತ್ಯಜಿಸಿದಾಗ, ಉಪರಾಷ್ಟ್ರಪತಿಯಾಗಿದ್ದ ಡಾ||ರಾಧಾಕೃಷ್ಣನ್‌ರು ರಾಷ್ಟ್ರಪತಿಯಾಗಿ ಆಯ್ಕೆಗೊಂಡರು. ೧೯೬೨ರಿಂದ ೧೯೬೭ ಮೇ ವರೆಗೆ ಒಂದು ಪೂರ್ಣ ಅವಧಿಯಲ್ಲಿ ರಾಷ್ಟ್ರಪತಿಯಾಗಿ ಕಾರ್ಯನಿರ್ವಹಿಸಿದರು. ಈ ಅವಧಿಯಲ್ಲಿಯೇ ಅವರು ಮೂವರು ಪ್ರಧಾನಮಂತ್ರಿಗಳನ್ನು ಕಂಡರು. ಪಂಡಿತ ಜವಾಹರಲಾಲ ನೆಹರೂ, ಶ್ರೀ ಲಾಲಬಹದ್ದೂರ ಶಾಸ್ತ್ರೀ, ಅನಂತರ ಶ್ರೀಮತಿ ಇಂದಿರಾ ಗಾಂಧಿ.

೧೯೬೭ ರಲ್ಲಿ ರಾಜಕಾರಣದಲ್ಲಿ ಬಹಳಷ್ಟು ಸ್ವಾರ್ಥ-ಸಣ್ಣತನಗಳು, ತಿಕ್ಕಾಟ ಪ್ರಾರಂಭವಾದಾಗ, ಡಾ|| ರಾಧಾಕೃಷ್ಣನ್‌ರು ತಮ್ಮ ಜೀವನದ ೭೮ನೇ ವಯಸ್ಸಿನಲ್ಲಿ ರಾಷ್ಟ್ರಪತಿ ಹುದ್ದೆಯಿಂದ ನಿವೃತ್ತರಾಗಿ ದಿಲ್ಲಿ ತ್ಯಜಿಸಿ ಮದ್ರಾಸಿಗೆ ಬಂದು ನೆಲೆಸಿದರು.

**(ಈ) ಆದರ್ಶ ಸದ್ಗೃಹಸ್ಥ :**

ಡಾ|| ರಾಧಾಕೃಷ್ಣನ್‌ರು ಶ್ರೇಷ್ಠ ಶಿಕ್ಷಕ, ಶಿಕ್ಷಣತಜ್ಞ, ರಾಜಕೀಯ ಮುತ್ಸದ್ದಿ, ತತ್ತ್ವಜ್ಞಾನಿಯಾಗಿದ್ದಂತೆಯೇ ಭಾರತೀಯ ಸಂಸ್ಕೃತಿ ಪರಂಪರೆಯ ಆದರ್ಶ ಸದ್ಗೃಹಸ್ಥರೂ ಆಗಿದ್ದರು.

ಡಾ|| ರಾಧಾಕೃಷ್ಣನ್‌ರು ವಿದ್ಯಾರ್ಥಿದೆಸೆಯಲ್ಲಿರುವಾಗಲೇ ಅಂದರೆ voorhees College, Velloreದಲ್ಲಿ ಅಧ್ಯಯನಕ್ಕಿರುವಾಗ, ೧೯೦೩ರಲ್ಲಿ ಮೇ ತಿಂಗಳಲ್ಲಿ "ಶಿವಕಾಮಮ್ಮ" ಎಂಬ ಕನ್ಯೆಯೊಂದಿಗೆ ಮದುವೆಯಾದರು. ಗ್ರೀಕ್ ದೇಶದ ಶ್ರೇಷ್ಠ ತತ್ತ್ವಜ್ಞಾನಿ ಸಾಕ್ರೇಟಿಸ್ ಬಹುಶಃ ತನ್ನ ಜೀವನಾನುಭವವನ್ನೇ ಹೇಳಿದಂತೆ "ಒಳ್ಳೆಯ ಹೆಂಡತಿ ದೊರಕಿದರೆ ಸದ್ಗೃಹಸ್ಥನಾಗುವಿ. ದುಷ್ಟ ಹೆಂಡತಿ ದೊರಕಿದರೆ ಶ್ರೇಷ್ಠ ತತ್ವಜ್ಞಾನಿಯಾಗುವಿ" ಎಂಬ ಮಾತು ಡಾ|| ರಾಧಾಕೃಷ್ಣನ್‌ರ ಬಾಳಿನಲ್ಲಿ ಮೊದಲಿನ ಅರ್ಧ ವಾಕ್ಯ ಸತ್ಯವಾಗಿ, ಎರಡನೆ ಅರ್ಧ ವಾಕ್ಯವು ಸುಳ್ಳಾಯಿತು.

ಡಾ|| ರಾಧಾಕೃಷ್ಣನ್‌ರ ಪತ್ನಿ ಶಿವಕಾಮಮ್ಮ ಒಳ್ಳೆಯ ಹೆಂಡತಿಯಾಗಿದ್ದುದರಿಂದ ಅವರು ಸದ್ಗೃಹಸ್ಥರೂ, ಶ್ರೇಷ್ಠ ತತ್ತ್ವಜ್ಞಾನಿಗಳೂ ಆದರು. ಡಾ|| ರಾಧಾಕೃಷ್ಣನ್‌ರ ಬಾಳಿನಲ್ಲಿ ಕೌಟುಂಬಿಕವಾಗಿ ಯಾವುದೇ ತೊಂದರೆಗಳು ಬರದಂತೆ ನೋಡಿಕೊಂಡರು. ಅವರನ್ನು ಸಂಪೂರ್ಣವಾಗಿ ತತ್ತ್ವಶಾಸ್ತ್ರ ಪ್ರಪಂಚಕ್ಕೇನೇ

ನೀಡಿದರು. ತತ್ತ್ವಶಾಸ್ತ್ರ ಅಧ್ಯಯನ ಚಿಂತನಕ್ಕೆ ಯಾವುದೇ ಪ್ರಾಪಂಚಿಕ ಅಡಚಣೆಗಳನ್ನು ಉಂಟು ಮಾಡದೇ, ಅನುವು ಮಾಡಿಕೊಟ್ಟರು. ಪ್ರತಿಯೊಬ್ಬ ಮಹಾಪುರುಷನ ಹಿಂದೆ ಒಂದು ಹೆಣ್ಣಿನ ತ್ಯಾಗ, ಪ್ರೋತ್ಸಾಹ ಇದ್ದೇ ಇರುತ್ತದೆ ಎಂಬ ಮಾತು ಶ್ರೀಮತಿ ಶಿವಕಾಮಮ್ಮನವರನ್ನು ಕುರಿತೇ ಹೇಳಿರಬಹುದೆಂದೆನಿಸುತ್ತದೆ.

ಡಾ|| ರಾಧಾಕೃಷ್ಣನ್ ಹಾಗೂ ಶ್ರೀಮತಿ ಶಿವಕಾಮಮ್ಮನವರದು ೫೩ ವರುಷಗಳ ಸುದೀರ್ಘವಾದ ದಾಂಪತ್ಯ ಜೀವನ (ಶ್ರೀಮತಿ ಶಿವಕಾಮಮ್ಮನವರು ೧೯೫೬ರಲ್ಲಿ ನಿಧನರಾದರು).

ಈ ದಂಪತಿಗಳ ಬಾಳಿನಲ್ಲಿ ಐದು ಜನ ಹೆಣ್ಣುಮಕ್ಕಳು, ಒಬ್ಬ ಗಂಡು ಮಗ ಹುಟ್ಟಿದರು. ಹಿರಿಯ ಮಗನ ಹೆಸರು ಸರ್ವಪಲ್ಲಿ ಗೋಪಾಲ (ಏಪ್ರೀಲ್ ೨೩, ೧೯೨೩ ರಲ್ಲಿ ಜನನ). ಇವರು ಡಾ. ಎಸ್ ಗೋಪಾಲ ಎಂದು ಪ್ರಸಿದ್ಧಿ ಖ್ಯಾತಿ ಪಡೆದರು. ಸುಪ್ರಸಿದ್ಧ ವಿದ್ವಾಂಸರಾಗಿ, ಇತಿಹಾಸ ತಜ್ಞರಾಗಿ ದಿಲ್ಲಿ, ಕೇಂಬ್ರಿಜ್ ವಿಶ್ವವಿದ್ಯಾಲಯಗಳಲ್ಲಿ ಸೇವೆ ಸಲ್ಲಿಸಿದ್ದಾರೆ.

**ಸಂತೃಪ್ತಿಯ ಜೀವನ :** ಡಾ|| ಎಸ್. ರಾಧಾಕೃಷ್ಣನ್‌ರು ೧೯೬೭ ಮೇ ತಿಂಗಳಲ್ಲಿ ರಾಷ್ಟ್ರಪತಿ ಹುದ್ದೆಯಿಂದ ನಿವೃತ್ತರಾಗಿ, ಮದ್ರಾಸಿನ ಎಡ್ವರ್ಡ ಈಲಿಯಟ್ಸ್ ರಸ್ತೆಯಲ್ಲಿರುವ ೩೦ನೇ ನಂಬರಿನ "ಗಿರಿಜಾ" ಎಂಬ ಭವ್ಯ ಮನೆಯಲ್ಲಿ ತಮ್ಮ ಬಾಳಿನ ಅಂತಿಮ ಒಂಭತ್ತು ವರುಷಗಳನ್ನು ಒಳ್ಳೆಯ ಸಮಾಧಾನ, ಶಾಂತಿ, ಸಂತೃಪ್ತಿಯಿಂದ ಕಳೆದರು.

ನಿವೃತ್ತ ಜೀವನದ ಈ ಅವಧಿಯಲ್ಲಿ Religion and Changing World (ಧರ್ಮ ಮತ್ತು ಬದಲಾಗುತ್ತಿರುವ ಜಗತ್ತು); Religion and Culture (ಧರ್ಮ ಮತ್ತು ಸಂಸ್ಕೃತಿ); Our Heritage (ನಮ್ಮ ಪರಂಪರೆ) Creative Life (ರಚನಾತ್ಮಕ ಜೀವನ); ಮುಂತಾದ ಗ್ರಂಥಗಳನ್ನು ಬರೆದರು.

ಡಾ|| ರಾಧಾಕೃಷ್ಣನ್‌ರು ಶುದ್ಧ ಶಾಖಾಹಾರಿ, ಧೂಮ್ರಪಾನವಿಲ್ಲದ, ಮದ್ಯಪಾನವರ್ಜಿತ ಸಾತ್ವಿಕ ಅನುಭಾವಿ, ಸುಜ್ಞಾನಿ, ತತ್ತ್ವಜ್ಞಾನಿಯಾಗಿದ್ದರು. ಬಾಳಿನುದ್ದಕ್ಕೂ ಓದುವದು ಅವರ ಹವ್ಯಾಸವಾಗಿತ್ತು. ಮುಪ್ಪಿನ ಕಾಲದಲ್ಲಿ ಸಮಯ ದೊರೆತಾಗಲೆಲ್ಲ ಮೊಮ್ಮಕ್ಕಳೊಂದಿಗೆ ಕ್ರಿಕೆಟ್ ಆಟದಲ್ಲಿ ಪಾಲ್ಗೊಳ್ಳುತ್ತಿದ್ದರು.

ಎಂಭತ್ತೇಳು ವರುಷಗಳ ಸುದೀರ್ಘ ಋಷಿ ಜೀವನ ಬಾಳಿದ ವಿಶ್ವವಿಖ್ಯಾತ ತತ್ತ್ವಜ್ಞಾನಿ ೧೯೭೫ನೇ ಇಸ್ವಿ ಏಪ್ರಿಲ್ ೧೭ರಂದು ಹೃದಯಬಡಿತ ಕ್ಷೀಣಿಸಿ, ಮದ್ರಾಸಿನ ನರ್ಸಿಂಗ್ ಹೋಂನಲ್ಲಿ ನಿಧನ ಹೊಂದಿದರು. ರಾಷ್ಟ್ರ ಗೌರವದೊಂದಿಗೆ

ಈ ಮಹಾನ್ ಚೇತನದ ಅಂತ್ಯಕ್ರಿಯೆ ಜರುಗಿತು. ಇಡೀ ವಿಶ್ವದ ಜನತೆ ಮಹಾತತ್ತ್ವಜ್ಞಾನಿ, ವಿಶ್ವಕುಟುಂಬಿಗೆ ತನ್ನ ಗೌರವವನ್ನು ಅಶ್ರುತರ್ಪಣದ ಮೂಲಕ ಅರ್ಪಿಸಿತು.

ಭರತಭೂಮಿಯ ಪವಿತ್ರ ಕ್ಷೇತ್ರ "ತಿರುತನಿ"ಯಲ್ಲಿ ಜನಿಸಿದ ಈ ಚೇತನವು ಬೆಳೆದು ಹೆಮ್ಮರವಾಗಿ, ವಿಶ್ವಕ್ಕೇನೇ ಭಾರತೀಯ ಧರ್ಮ, ತತ್ತ್ವಜ್ಞಾನಗಳ ಅಮೃತ ಫಲಗಳನ್ನು ಉಣಿಸಿ, ಇಂದಿಗೂ ತನ್ನ ಕೃತಿಗಳಲ್ಲಿ ಜೀವಂತವಾಗಿ ನಿರಾಕಾರ ಜ್ಞಾನರೂಪದಲ್ಲಿ ಬದುಕಿದೆ.

ಇಂತಹ ವಿಶ್ವವಿಖ್ಯಾತ ತತ್ವಜ್ಞಾನಿಯಾಗಿದ್ದರೂ ಡಾ|| ರಾಧಾಕೃಷ್ಣನ್‌ರು ತಮ್ಮ ಆತ್ಮಚರಿತ್ರೆಯನ್ನು ಬರೆದುಕೊಳ್ಳಲಿಲ್ಲ. ಪಾಶ್ಚಿಮಾತ್ಯ ವಿದ್ವಾಂಸರೊಬ್ಬರು. ವಿನಂತಿಸಿಕೊಂಡಾಗ ವಿನಯಪೂರ್ವಕವಾಗಿಯೇ ತಿರಸ್ಕರಿಸಿದರಂತೆ. ತಮ್ಮ ಜೀವನ ಚರಿತ್ರೆಯ ಕುರಿತಾದ ಕೆಲವು ಅಂಶಗಳನ್ನಾದರೂ ತಿಳಿಸಿರಿ ಎಂದು Paul Arther Scjilpp ಅವರು ಒತ್ತಾಯಪೂರ್ವಕವಾಗಿ ತಿಳಿಸಿದಾಗ, ಕೆಲವು ಅಂಶಗಳನ್ನು ಬರೆದು ಕಳಿಸುವ ಸಂದರ್ಭದಲ್ಲಿ - "I am not persuaded that the events of my life are of much interest to the readers of this Volume" ಎಂದು ಬರೆದಿದ್ದರಂತೆ. ಇಷ್ಟೊಂದು ನಿಗರ್ವಿ, ನಿರಹಂಕಾರಿ ವ್ಯಕ್ತಿ ರಾಧಾಕೃಷ್ಣನ್‌ರು.

# ೪. ವಿಶ್ವವಿಖ್ಯಾತ ತತ್ತ್ವಜ್ಞಾನಿ ಡಾ|| ರಾಧಾಕೃಷ್ಣನ್‌ರು

ಡಾ|| ಸರ್ವಪಲ್ಲಿ ರಾಧಾಕೃಷ್ಣನ್‌ರು ತಮ್ಮ ಬಾಳಿನಲ್ಲಿ ಕಲಿತದ್ದು, ಕಲಿಸಿದ್ದು, ಉಪದೇಶಿಸಿದ್ದು, ಬರೆದದ್ದು ಎಲ್ಲವನ್ನೂ ಗಮನಿಸಿದಾಗ ಅವರೊಂದು ಮಾನವಕುಲದ ವಿಶ್ವಕೋಶ (Encyclopedia of mankind) ಎಂದು ಕರೆಯಬಹುದು.

ಡಾ|| ರಾಧಾಕೃಷ್ಣನ್‌ರು ತತ್ತ್ವಜ್ಞಾನದ ಬಗ್ಗೆ ಸರಿಯಾದ ತಿಳುವಳಿಕೆ ಹೊಂದಿದವರಾಗಿದ್ದರು. ತತ್ತ್ವಜ್ಞಾನವೆಂದರೆ-(Philosophy) is understanding, contemplation, insight[೪] ಎಂದು ತಿಳಿಯಪಡಿಸಿದ್ದಾರೆ. ತತ್ತ್ವಜ್ಞಾನವು ಮಾನವನಿಗೆ ಸರಿಯಾದ ತಿಳುವಳಿಕೆ, ಚಿಂತನ ಮತ್ತು ಅಂತರ್‌ದೃಷ್ಟಿ (ವಿವೇಕ)ಯನ್ನೀಯುತ್ತದೆ. ಸ್ವತಃ ಈ ವಿಚಾರದಂತೆಯೇ ಅವರು ಬಾಳಿದರು.

ತತ್ತ್ವಜ್ಞಾನಿಯ ಧ್ಯೇಯಾದರ್ಶವನ್ನು ಸ್ವತಃ ಅವರೇ ಕೆಳಗಿನಂತೆ ಬರೆದಿದ್ದಾರೆ. A Philosopher can find no rest until he gains a view or vision of the world of things and persons which will enable him to interpret the manifold experiences as expressive, in some sort of a purpose.[೫] ತತ್ತ್ವಜ್ಞಾನಿಯು ಜಗತ್ತಿನ ಮಾನವರ ಹಾಗೂ ವಸ್ತುಗಳ ಕುರಿತು ಸರಿಯಾದ ದೃಷ್ಟಿಕೋನವನ್ನು ಗಳಿಸಿಕೊಂಡು. ಅವುಗಳಿಗೆ ಉದ್ದೇಶವನ್ನು, ಅನುಭವವನ್ನು ವಿವರಿಸದ ಹೊರತು ಆತನಿಗೆ ವಿಶ್ರಾಂತಿಯೆಂಬುದಿಲ್ಲ.

ಡಾ. ರಾಧಾಕೃಷ್ಣನ್‌ರು ತಮ್ಮ ಸುದೀರ್ಘ ಬಾಳಿನುದ್ದಕ್ಕೂ ಮಾನವಕುಲದ ಕುರಿತು, ಅದರ ಏಳ್ಗೆಯ ಕುರಿತು ಚಿಂತನ ಮಾಡಿದರು. ತಿಳುವಳಿಕೆ ನೀಡಿದರು. ಎಚ್ಚರಿಸಿದರು, ತಿದ್ದಿದರು. ಪೌರ್ವಾತ್ಯ-ಪಾಶ್ಚಿಮಾತ್ಯ ಧರ್ಮ-ತತ್ತ್ವಜ್ಞಾನಗಳ ಕುರಿತು; ನಾಗರಿಕತೆ -ಸಂಸ್ಕೃತಿಗಳ ಕುರಿತು; ಮಾನವಕುಲದ ಸರ್ವಾಂಗೀಣ ಪ್ರಗತಿಯ ಕುರಿತು ಬರೆದ ಮೂವತ್ತಕ್ಕೂ ಮೇಲ್ಪಟ್ಟ ಗ್ರಂಥಗಳು, ನೂರಾರು ಉಪನ್ಯಾಸ-ಲೇಖನಗಳು ಅವರ ಜ್ಞಾನದಾಳವನ್ನು ಪ್ರತಿಬಿಂಬಿಸುತ್ತವೆ.

---

೪. An Idealistic View of Life-page 15.
೫. Ibid-page 15-16.

ಇಡೀ ಪ್ರಪಂಚದಲ್ಲಿಯೇ ಡಾ. ರಾಧಾಕೃಷ್ಣನ್‌ರಿಗೆ ಸಿಕ್ಕಷ್ಟು ಗೌರವ ಪ್ರಶಸ್ತಿಗಳು, ಮೆಡಲ್‌ಗಳು, ಬಹುಮಾನಗಳು, ಪದವಿಗಳು ಬಹುಶಃ ಇನ್ನಾರಿಗೂ ದೊರೆತಿಲ್ಲವೆಂದು ಹೇಳಿದರೆ ಉತ್ಪ್ರೇಕ್ಷೆಯಾಗಲಿಕ್ಕಿಲ್ಲ. ಆಕ್ಸ್‌ಫರ್ಡ, ಕ್ಯಾಂಬ್ರಿಜ್, ಲಂಡನ್, ನ್ಯೂಯಾರ್ಕ್, ಫ್ರಾನ್ಸ್, ಚೀನ ಮುಂತಾದ ಯುನಿವರ್ಸಿಟಿಗಳಲ್ಲದೇ ದೇಶ_ವಿದೇಶಗಳ ಐವತ್ತಕ್ಕೂ ಮೇಲ್ಪಟ್ಟು ವಿಶ್ವವಿದ್ಯಾಲಯಗಳಿಂದ ಡಾಕ್ಟರೇಟ್ ಗೌರವ ಲಭಿಸಿವೆ.

ಡಾ. ರಾಧಾಕೃಷ್ಣನ್‌ರನ್ನು ಕುರಿತು ದೇಶ-ವಿದೇಶಗಳ ಮಹಾನ್ ಮಹಾನ್ ನೇತಾರರು, ಸಂತರು, ಕವಿಗಳು, ತತ್ತ್ವಜ್ಞಾನಿಗಳು, ಪ್ರಾಜ್ಞರು ಹೃದಯತುಂಬಿ ಕೊಂಡಾಡಿದ್ದಾರೆ. ನೊಬೆಲ್ ಪಾರಿತೋಷಕ ವಿಜೇತ ವಿಶ್ವಕವಿ ರವೀಂದ್ರನಾಥ ಟ್ಯಾಗೋರ ಅವರು ಡಾ. ರಾಧಾಕೃಷ್ಣನ್‌ರ 'An idealistic view of life' (ಆದರ್ಶವಾದಿಯ ಜೀವನದೃಷ್ಟಿ) ಕೃತಿಯನ್ನು ಮೆಚ್ಚಿಕೊಂಡು 'I consider the book to be of the most original and significant contributions to modern thought. Personally, I am deeply greatful for the benefit I have derived from the beauty and lucidity as well as the wide range of its philosophical insight.'[೬] ಎಂದು ಬರೆದು ಕೃತಜ್ಞತೆ ಸಲ್ಲಿಸಿದ್ದಾರೆ.

ಪಾಶ್ಚಿಮಾತ್ಯ ತತ್ತ್ವಚಿಂತಕ ಅವರೂ ಸಹ ಈ ಕೃತಿಯ ಬಗ್ಗೆ 'One of the most profoundly moving religious books of our time'.[೬ಅ] ಎಂದು ಮೆಚ್ಚುಗೆ ಅಭಿಮಾನ ವ್ಯಕ್ತಪಡಿಸಿದ್ದಾರೆ.

ತತ್ತ್ವಚಿಂತಕ Prof. R.C. Zaehner ಅವರಂತೂ ಡಾ. ರಾಧಾಕೃಷ್ಣನ್‌ರ ಸ್ಥಾನವನ್ನು ಪೌರ್ವಾತ್ಯ-ಪಾಶ್ಚಿಮಾತ್ಯ ತತ್ತ್ವಜ್ಞಾನದಲ್ಲಿ ತೋರಿಸಿದ್ದಾರೆ -

'He is also in no small way an original thinker. In the western tradition Radhakrishan mediates between Hegel and Bergson, in the Eastern between Shankar and Ramanuja.'[೭] ಅಂದರೆ ಡಾ. ರಾಧಾಕೃಷ್ಣನ್‌ರು ಮೂಲಭೂತವಾಗಿ ವಿಚಾರವಾದಿಗಳು, ಪಾಶ್ಚಿಮಾತ್ಯ ತತ್ತ್ವಜ್ಞಾನಿಗಳಾದ ಹೆಗಲ್ ಮತ್ತು ಬರ್ಗಸನ್‌ರ

---

೬. An Idealistic View of Life. (cover page iv)

೬ಅ. Ibid

೭. Arpura J. G. Radhakrishnan and integral Experience P.V.

ನಡುವೆ, ಪೌರ್ವಾತ್ಯರಲ್ಲಿ ಶಂಕರ ಮತ್ತು ರಾಮಾನುಜರ ನಡುವೆ ಸ್ಥಾನವನ್ನು ಹೊಂದಿದ್ದಾರೆ. ಇದು ಸ್ವಲ್ಪ ಉತ್ಪ್ರೇಕ್ಷೆಯ ಹೇಳಿಕೆಯೆನಿದರೂ ಕೂಡ, ಡಾ. ರಾಧಾಕೃಷ್ಣನ್‌ರ ತತ್ತ್ವಚಿಂತನೆಯ ಹಿರಿಮೆಯನ್ನು ಗಮನಿಸಬಹುದಾಗಿದೆ.

ಕ್ಯಾಲಿಫೋರ್ನಿಯಾದ Johan A. Hutchison ಅವರು 'there must be pioneers and surely Radhakrishnan was one, His work is well work'.[೮] ಅಂದರೆ ಅವರೊಬ್ಬ ಪ್ರಪಂಚದ ಅಗ್ರಗಾಮಿಗಳಾಗಿದ್ದಾರೆ.

University of Minnesotaದ G. P. Conger ಅವರು ಡಾ. ರಾಧಾಕೃಷ್ಣನ್‌ರನ್ನು ಆದರ್ಶವಾದಿ ತತ್ತ್ವಜ್ಞಾನಿಗಳಲ್ಲಿ ಅಗ್ರಗಣ್ಯರೆಂದು ಸ್ತುತಿಸಿದ್ದಾರೆ. 'Certainly he is one of the two or three greatest living idealist philosophers; many would rank him first.'[೯]

ತತ್ತ್ವಜ್ಞಾನಿ E. S. Brightman ಅವರು ಡಾ. ರಾಧಾಕೃಷ್ಣನ್‌ರನ್ನು ಆಧುನಿಕ ಕಾಲದ ಬಹು ದೊಡ್ಡ ಆಧ್ಯಾತ್ಮ ತತ್ತ್ವಜ್ಞಾನಿ ಎಂದು ಕರೆದಿರುವರು. 'Dr. Radhakrishnan is one of the greatest philosophers of mysticism in modern times.'[೧೦]

ಇಂಗ್ಲಂಡ ದೇಶದ ತತ್ತ್ವಚಿಂತಕ Principal Jacks ಅವರು 'Sir S. Radhakrishnan is not only a great living master of Eastern thought but of west as well.'[೧೧] ಎಂದು ಕರೆದಿದ್ದಾರೆ. ಅಂದರೆ ಡಾ. ರಾಧಾಕೃಷ್ಣನ್‌ರು ಕೇವಲ ಪೌರ್ವಾತ್ಯ ವಿಚಾರಧಾರೆಯ ಗುರುವಷ್ಟೇ ಅಲ್ಲ. ಅವರು ಪಾಶ್ಚಿಮಾತ್ಯ ವಿಚಾರಧಾರೆಗೂ ಗುರುವಾಗಿದ್ದಾರೆ.

Peter A Pardue ಅವರು 'The great bulk of his work is distingushed by a synthetic power clearly evident in the development of his own distinctive philosophy of life.'[೧೨] ಎಂದು ಬರೆದಿದ್ದಾರೆ.

ಡಾ. ರಾಜೇಂದ್ರಪಾಲಸಿಂಗ್‌ರು ರಾಧಾಕೃಷ್ಣನ್ ಅವರದು ಎಲ್ಲ ಕ್ಷೇತ್ರಗಳಲ್ಲಿಯೂ ಘನತೆಯುಳ್ಳ ಹೆಸರು ಎಂದು ಗೌರವದಿಂದ ನುಡಿದಿದ್ದಾರೆ-

---

೮. Maya in Radhakrishan's Thought P. vii.

೯. Radhakrishanan : Compararive Studies in Philosophy p. 304

೧೦. The Philosophy of Radhakrishnan Ed. P. A. Schilpp p. 414೧೧. The Heart of Hindustan p iv.

೧೨. Encyclopedia of world Biography Vol. IX p. 77-78

'Not only in the field of Education but in other fields also he is an august name.'[೧೩]

ಮೈಸೂರು ವಿಶ್ವವಿದ್ಯಾಲಯದ ಉಪಕುಲಪತಿಯಾಗಿದ್ದ ಪ್ರೊ. ಎನ್.ಎ. ನಿಕಂ ಅವರು 'ಸಮಕಾಲೀನ ಭರತಖಂಡದಲ್ಲಿ ಡಾ. ಎಸ್. ರಾಧಾಕೃಷ್ಣನ್ ಅವರು ನಮ್ಮ ತತ್ತ್ವಶಾಸ್ತ್ರ ಗ್ರಂಥ ವ್ಯಾಖ್ಯಾತೃಗಳ ವಿಪುಲ ಮೇಧಾಶಕ್ತಿಗೂ, ಪ್ರತಿಭೆಗೂ ಪ್ರತಿನಿಧಿಯಾಗಿದ್ದಾರೆ.[೧೪] ಎಂದು ಗೌರವದಿಂದ ನುಡಿದಿದ್ದಾರೆ.

ಸುಪ್ರಸಿದ್ಧ ಇತಿಹಾಸಜ್ಞ ಅರ್ನಾಲ್ಡ್ ಟಾಯನ್‌ಬೀ (Arnold Toynbee) ಕೂಡ ಡಾ. ರಾಧಾಕೃಷ್ಣನ್‌ರು ಇಡೀ ವಿಶ್ವಕ್ಕೆ ಭಾರತೀಯ ಮಾರ್ಗದರ್ಶನ ತೋರಿದ್ದಾರೆ ಎಂದು ಬರೆದಿರುವರು, 'Radhakrishnan has opened up a way characteristically Indian way of the present generation all over the world'.[೧೫]

ನಮ್ಮ ನಾಡಿನ ಶ್ರೇಷ್ಠ ದಾರ್ಶನಿಕ ಚಿಂತನಶೀಲ, ರಾಷ್ಟ್ರಕವಿ ಕುವೆಂಪು ಅವರು ರಾಧಾಕೃಷ್ಣನ್‌ರ ಕುರಿತು ಬರೆದ ಮಾತುಗಳು ಈ ತತ್ವಜ್ಞಾನಿಯ ಮಹಾನತೆಯನ್ನು ಬಿತ್ತರಿಸುತ್ತವೆ. 'ಡಾ. ಎಸ್. ರಾಧಾಕೃಷ್ಣನ್ ಅವರು ಸುಪ್ರಸಿದ್ಧ ತತ್ತ್ವಜ್ಞಾನಿಗಳಾಗಿದ್ದಾರೆ. ಅವರ ಕೀರ್ತಿ ವಿದ್ವತ್ ಪ್ರಪಂಚವನ್ನೆಲ್ಲ ವ್ಯಾಪಿಸಿದೆ. ಪಾಶ್ಚಾತ್ಯ ವೇದಿಕೆಗಳ ಮೇಲೆ ನಿಂತು ಮಾಡಿದ ಅವರ ಉಪನ್ಯಾಸಗಳನ್ನು ಕೇಳಿ ಅಲ್ಲಿಯ ಸುಶಿಕ್ಷಿತ ಜನರು ಅವರ ವಾಗ್‌ವೈಖರಿಗೂ, ಆಲೋಚನೆಗಳ ಉಜ್ವಲತೆಗೂ ಮಾರು ಹೋಗಿದ್ದಾರೆ. ಆರ್ಷೇಯ ಕಾಲದಿಂದ ಬೆಳೆದು ಬಂದಿರುವ ಭಾರತೀಯ ತತ್ತ್ವಶಾಸ್ತ್ರಕ್ಕೆ ಅವರ ಗ್ರಂಥಗಳು ಮಹಾ ಭಾಷ್ಯಗಳಂತಿವೆ. ಅವರ ಶಾಸ್ತ್ರೀಯವಾದ ತತ್ತ್ವಾಭ್ಯಾಸ, ಗಹನವಾದ ಚಿಂತನ-ಮಂಥನ, ಆಲೋಚನ ಸರ್ವ ಗ್ರಾಹ್ಯವೂ ಸುಸ್ಪಷ್ಟವೂ ಆದ ಲೇಖನ ಶೈಲಿ ಮತ್ತು ವಕ್ತೃತ್ವಗಳಿಂದ ಅವರು ಪ್ರಾಚ್ಯ-ಪಾಶ್ಚಾತ್ಯ ದೇಶಗಳಲ್ಲೆಲ್ಲ ಶ್ರೇಷ್ಠ ತತ್ತ್ವಜ್ಞಾನಿಗಳೆಂದು ಮಾನ್ಯರಾಗಿದ್ದಾರೆ. ಆದರೆ ಅವರ ದಾರ್ಶನಿಕ ದೀಪ್ತಿ ದೇಶ ಭಾಷೆಗಳ ಮೂಲಕ ಹರಿದು ಜನ ಹೃದಯವನ್ನು ಬೆಳಗದ ಹೊರತು ನಮ್ಮ ದೇಶದಲ್ಲಿ ಅವರ ಹೆಸರು ಬರಿಯ ಹೆಸರಾಗಿಯೇ ಉಳಿಯುತ್ತದೆ. ಅವರ ಗ್ರಂಥಗಳು ದೇಶಭಾಷೆಗಳಿಗೆ ಅನುವಾದವಾಗಬೇಕು. ಆ

---

೧೩. Radhakrishnan : The Portrait of an Educationist p.7

೧೪. ಪ್ರಾಚ್ಯ ಮತ್ತು ಪಾಶ್ಚಾತ್ಯ ಸಂಸ್ಕೃತಿ (ಕನ್ನಡ ಅನುವಾದ) ಪು. xi

೧೫. Sarvapalli Radhakrishnan p.60

ಮೂಲಕ ಅವರ ನಿಜವಾದ ವ್ಯಕ್ತಿತ್ವ ನಮ್ಮ ಜನರಿಗೆ ಅರಿವಾಗಬೇಕು. ಆಗ ಅವರ ಕೀರ್ತಿ ಜನ ಹೃದಯದಲ್ಲಿ ಶಕ್ತಿಜ್ಯೋತಿಯಾಗಿಯೂ ಪರಿಣಮಿಸುತ್ತದೆ.'[೧೬]

ಹಿರಿಯ ಅನುಭಾವಿ ಕವಿಗಳಾದ ಕುವೆಂಪು (ಕೆ.ವ್ಹಿ. ಪುಟ್ಟಪ್ಪ) ಅವರು ತಿಳಿಯಪಡಿಸಿರುವಂತೆ, ಡಾ. ರಾಧಾಕೃಷ್ಣನ್ ಎಂಬುದು ಇಂದು ಕೇವಲ ಹೆಸರಾಗಿಯೇ ಉಳಿದಿದೆ. ಅವರ ಶೈಕ್ಷಣಿಕ, ಧಾರ್ಮಿಕ, ಆಧ್ಯಾತ್ಮಿಕ ವಿಚಾರಗಳು ನಮ್ಮ ದೇಶದ ಯುವಜನತೆಗೆ ಸಾಮಾನ್ಯ ಜನತೆಗೆ ಅಷ್ಟೇ ಏಕೆ ಶಿಕ್ಷಕ ಸಮುದಾಯಕ್ಕೇನೇ ಇನ್ನೂ ಮುಟ್ಟಿಲ್ಲ. ಇದನ್ನು ನೆನೆಸಿಕೊಂಡಾಗ ವಿಷಾದವೆನಿಸುತ್ತದೆ.

ಡಾ. ಎಸ್ ರಾಧಾಕೃಷ್ಣನ್‌ರು ನಮ್ಮ ಸನಾತನ ಭಾರತದ ಪುರಾತನ ಋಷಿಗಳ, ಸಂತರ, ದಾರ್ಶನಿಕರ, ಅನುಭಾವಿಗಳ ಜೀವನ-ವಿಚಾರಗಳಿಂದ ಪ್ರಭಾವಿತರಾಗಿ ಅವರೆಲ್ಲರ ಅಂತಃಸತ್ವವನ್ನು ತಮ್ಮದಾಗಿಸಿಕೊಂಡಿದ್ದರೂ ಸಹ, ಇಡೀ ಪ್ರಪಂಚದ ಎಲ್ಲ ಧರ್ಮಗಳ, ತತ್ತ್ವಗಳ, ವಿಚಾರವಾದಿಗಳ ವಿಚಾರಗಳನ್ನು ವಿಮರ್ಶಾತ್ಮಕವಾಗಿ ಅಧ್ಯಯನ ಮಾಡಿ ತಮ್ಮದೇ ಆದ ಸ್ವತಂತ್ರ ನಿಲುವನ್ನು ತಾಳಿದವರು. ಅವರ ವಿಚಾರಗಳಲ್ಲಿ ಸ್ವಂತಿಕೆ ಇದೆ, ಹೊಸತನವಿದೆ, ಪ್ರಪಂಚ ಕಲ್ಯಾಣದ ಕಳಕಳಿ ಇದೆ. ಉತ್ತಮ ಜನಾಂಗ ನಿರ್ಮಾಣವಾಗಬೇಕೆಂಬ ಹಂಬಲವಿದೆ.

ಆದ್ದರಿಂದಲೇ ಅವರು ತತ್ತ್ವಜ್ಞಾನವನ್ನು ಅಧ್ಯಯನ ಮಾಡಿದರು. ಚಿಂತನ ಮಾಡಿದರು, ಕಲಿಸಿದರು. ತತ್ತ್ವಜ್ಞಾನದ ಮಹತಿಯನ್ನು ಬಹುಮಾರ್ಮಿಕವಾಗಿ ಅವರು ಹೀಗೆ ಹೇಳುತ್ತಾರೆ. -'Philosophy has for its function the ordering of life and the guidence of action. It sits at the helm and directs our course through the changes and Chances of the World'.[೧೭]

ಅಂದರೆ ತತ್ತ್ವಜ್ಞಾನದ ಕಾರ್ಯವೆಂದರೆ ಜೀವನಕ್ಕೆ ಕ್ರಮಬದ್ಧತೆಯನ್ನೀಯುವುದು ಮತ್ತು ಕಾರ್ಯವನ್ನು ನಿರ್ದೇಶಿಸುವುದಾಗಿದೆ. ಜಗತ್ತಿನ ಬದಲಾವಣೆ ಮತ್ತು ಅವಕಾಶಗಳಲ್ಲಿ ಅದು ಚುಕ್ಕಾಣಿಯ ಮುಂಚೂಣಿಯಲ್ಲಿ ಕುಳಿತು ನಮ್ಮ ಬಾಳನ್ನು ನಿರ್ದೇಶಿಸುತ್ತದೆ.

ವಿಶ್ವವಿಖ್ಯಾತ ತತ್ತ್ವಜ್ಞಾನಿಯೆಂದೆನಿಸಿಕೊಂಡ ಡಾ. ರಾಧಾಕೃಷ್ಣನ್‌ರು ಇಡೀ ಪ್ರಪಂಚಕ್ಕೆ, ಮಾನವಕುಲವೆಂಬ ಹಡಗಿನ ಚುಕ್ಕಾಣಿ ಹಿಡಿದು, ಅದನ್ನು ತಮ್ಮ

---

೧೬. ಪ್ರಾಚ್ಯ ಮತ್ತು ಪಾಶ್ಚಾತ್ಯ ಸಂಸ್ಕೃತಿ ಪುಟ vi
೧೭. Indian Philosophy Vol. II p. 770-771

ಆಧ್ಯಾತ್ಮದ, ಆದರ್ಶವಾದದ ವಿಚಾರ ಮಾರ್ಗದಲ್ಲಿ ಮುನ್ನಡೆಸಿದವರು. ಅವರ ಮೌಲಿಕ ಕೃತಿಗಳು ಮಾನವ ಜೀವನದ ಎಲ್ಲ ಹಂತಗಳಲ್ಲಿಯೂ ವಿಶ್ವದ ಜನತೆಗೆ ಮಾರ್ಗದರ್ಶನ ಮಾಡುತ್ತವೆ.

ಡಾ. ರಾಧಾಕೃಷ್ಣನ್‌ರಂತಹ ಮಹಾ ಮೇಧಾವಿ, ಚಿಂತನಶೀಲರು ಭೌತಿಕವಾಗಿ ನಮ್ಮಿಂದ ಅಗಲಿ ಹೋಗಿದ್ದರೂ, ಅವರು ತಮ್ಮ ಸಾಧನೆಯ ಕೃತಿಗಳಲ್ಲಿ ಜೀವಂತವಾಗಿದ್ದಾರೆ. ಅವರು ಮಾನವಕುಲದ ಜನಾಂಗಕ್ಕೆ ಬಿಟ್ಟು ಹೋಗಿರುವ ಉತ್ಸಾಹ ಚೈತನ್ಯ, ವಿಚಾರಗಳು ತಲೆಮಾರಿನಿಂದ ತಲೆಮಾರುಗಳವರೆಗೆ ಅವ್ಯಾಹತವಾಗಿ ಮುಂದುವರೆದುಕೊಂಡು ಹೋಗುತ್ತವೆ. ಅವರ ಸಾಧನೆ-ಸಿದ್ಧಿಗಳು ನಿತ್ಯ ನೂತನ, ಅಮರ.

# ೫. ಡಾ. ರಾಧಾಕೃಷ್ಣನ್‌ರ ವಿಚಾರಗಳು

ಡಾ. ರಾಧಾಕೃಷ್ಣನ್‌ರದು ಬಹುಮುಖ ಪ್ರತಿಭೆಯ ವ್ಯಕ್ತಿತ್ವ. 'ಆಡು ಮುಟ್ಟದ ಸೊಪ್ಪಿಲ್ಲ' ಎಂಬ ಗಾದೆಯ ಮಾತಿನಂತೆ ಡಾ. ರಾಧಾಕೃಷ್ಣನ್‌ರು ಚಿಂತನ ಮಾಡಿ ಹೇಳದ, ಬರೆಯುದ ವಿಷಯಗಳೇ ಇಲ್ಲವೆನ್ನಬಹುದು. ಅವರದು ಆದರ್ಶವಾದಿಯ ದೃಷ್ಟಿಕೋನ. ವ್ಯಕ್ತಿ-ಸಮಾಜದ, ವ್ಯಷ್ಟಿ-ಸಮಷ್ಟಿಯ ವಿಶ್ವದ ಹಿತದೃಷ್ಟಿಯನ್ನಿರಿಸಿಕೊಂಡು ಧಾರ್ಮಿಕ, ಸಾಮಾಜಿಕ, ರಾಜಕೀಯ, ಆರ್ಥಿಕ, ಕೌಟುಂಬಿಕ, ಶೈಕ್ಷಣಿಕ, ಆಧ್ಯಾತ್ಮಿಕ, ತಾತ್ವಿಕ ವಿಚಾರಗಳನ್ನು ಮಂಡಿಸಿದ್ದಾರೆ.

ಭಾರತದ ಧರ್ಮ-ಪರಂಪರೆ, ತತ್ತ್ವಜಿಜ್ಞಾಸೆಗಳ ಗಂಧವಿಲ್ಲದ ಬಹಳಷ್ಟು ಜನ ಪಾಶ್ಚಿಮಾತ್ಯರು, ಭಾರತವನ್ನು 'ಬದಲಾಗದ ಪೂರ್ವ' ಎಂದು ಹೀಯಾಳಿಸುತ್ತಿರುವುದನ್ನು ಕಂಡ ಡಾ. ರಾಧಾಕೃಷ್ಣನ್‌ರು, ಕೇವಲ ಪಾಶ್ಚಿಮಾತ್ಯರಿಗಷ್ಟೇ ಅಲ್ಲ, ಇಡೀ ವಿಶ್ವದ ಜನತೆಗೇನೇ ಭಾರತದ ಹಳೆ ಬೇರು ಹೊಸ ಚಿಗುರಿನ ನಿತ್ಯ ನೂತನ ವಿಶ್ವವಿನೂತನ ಸಂಸ್ಕೃತಿಯ ಮಹತಿಯನ್ನು ಮನಗಾಣಿಸಿ ಕೊಟ್ಟರು.

ಡಾ. ರಾಧಾಕೃಷ್ಣನ್‌ರು ಭಾರತದ ತತ್ತ್ವಶಾಸ್ತ್ರ ಕುರಿತು ಬರೆಯುತ್ತ 'Indian Philosophy alone can give a right perspective about the past of India.[೧೮]

ಭಾರತೀಯ ತತ್ತ್ವಶಾಸ್ತ್ರವು ನಮಗೆ ಪ್ರಾಚೀನ ಭಾರತದ ಸರಿಯಾದ ದೃಷ್ಟಿಯನ್ನು, ತಿಳುವಳಿಕೆಯನ್ನು ನೀಡುತ್ತದೆ ಎಂಬುದನ್ನು ಸುಂದರವಾಗಿ ನೇರವಾಗಿ ಡಾ. ರಾಧಾಕೃಷ್ಣನ್‌ರು ತಿಳಿಸುತ್ತಾರೆ.

ಭಾರತೀಯ ದರ್ಶನವು ಕೇವಲ ಭೌತಿಕ ಪ್ರಪಂಚದ ಮೌಲ್ಯಗಳ ಮೇಲೆ ಬದುಕಿಲ್ಲ. ಅದು ಮೂಲತಃ ಆಧ್ಯಾತ್ಮದ ತಳಹದಿಯ ಮೇಲೆ ನಿಂತಿದೆಯೆಂಬುದನ್ನು ಡಾ. ರಾಧಾಕೃಷ್ಣನ್‌ರು ತೋರಿಸಿಕೊಟ್ಟಿದ್ದಾರೆ.

Philosophy in India is essentially Spiritual.[೧೯] ಎಂದು ತಿಳಿಯಪಡಿಸಿದ್ದಾರೆ. ಆಧ್ಯಾತ್ಮದ ಚಿಂತನ ಧ್ಯೇಯವೇ ಭಾರತೀಯರ ಜೀವನದ

೧೮. Indian Philosophy Vol. I p. 55
೧೯. Ibid, p. 24

ಮೇಲೆ ಪ್ರಭಾವ ಬೀರಿದೆ ಎಂದು ತಿಳಿಸುತ್ತ The spiritual; motive dominates life in India.[೨೦] ಎಂಬುದನ್ನು ಒತ್ತಿ ಒತ್ತಿ ಸಾರಿದ್ದಾರೆ.

**(ಅ) ಧಾರ್ಮಿಕ ವಿಚಾರಗಳು :**

ಡಾ. ರಾಧಾಕೃಷ್ಣನ್‌ರು ಬಾಲ್ಯದಿಂದಲೇ ಧಾರ್ಮಿಕ ಪರಿಸರದಲ್ಲಿ ಬೆಳೆದು ಬಂದವರು. ತಮ್ಮ ಶಿಕ್ಷಣ ಅಧ್ಯಯನದೊಂದಿಗೆ ಜಾಗತಿಕ ಧರ್ಮಗಳ ಅಧ್ಯಯನವನ್ನೂ ಮಾಡಿದವರು. ಸರ್ವಧರ್ಮಗಳ ಲೋಪದೋಷಗಳ ಜೊತೆಗೆ ಅವುಗಳ ಸಾರ-ಸತ್ವವನ್ನೂ ಅರಿತವರು. ಅವರೊಬ್ಬ ತತ್ತ್ವ ಚಿಂತನಶೀಲ ವ್ಯಕ್ತಿಯಾಗಿದ್ದುದರಿಂದ ಧರ್ಮದ ಬಗ್ಗೆ ಅಂಧಶ್ರದ್ಧೆಯನ್ನು ತೊರೆದು ವಿಚಾರವಂತಿಕೆಯ ಶ್ರದ್ಧೆಯನ್ನು ಬೆಳೆಸಿಕೊಂಡವರು. ಧರ್ಮವೆಂಬುದು ನಮಗೆ ಬೇಕು ಬೇಕಾದಂತೆ ರೂಪಿಸಿಕೊಂಡ ಅನೈಸರ್ಗಿಕ, ಅಲೌಕಿಕ ಅದ್ಭುತ ಕಲ್ಪನೆಯಲ್ಲ. ಅದು ಮಾನವನ ಆತ್ಮಾನುಸಂಧಾನದ, ಅನುಭವದ ಮೊತ್ತ ಎಂದು ತಿಳಿಸುತ್ತಾರೆ. ಧರ್ಮವೆಂಬುದು ಜನಾಂಗಗಳ ಆಧ್ಯಾತ್ಮ ಸಾಧನೆಯ ಮತ್ತು ಸಾಮಾಜಿಕ ವಿಕಾಸದ ದಾಖಲೆಯೂ ಆಗಿದೆಯೆಂಬುದನ್ನು ತಿಳಿಸುತ್ತಾರೆ, 'Religion is not a mere theory of the Super natural which we can put on or off as we please. It is an expression of the Spiritual experience of the race, a record of its social evolution, an integral element of the society in which it is found.'[೨೧]

ಡಾ. ರಾಧಾಕೃಷ್ಣನ್‌ರು ತಿಳಿಸುತ್ತಾರೆ - ಎಲ್ಲ ಧರ್ಮಗಳು ಹುಟ್ಟುವುದು 'ಮನುಷ್ಯನ ಚಿತ್ತ' ಎಂಬ ಪವಿತ್ರ ಭೂಮಿಯಲ್ಲಿಯೇ, ಬೆಳೆಯುವುದು ಅದೇ ಸತ್ವದಿಂದಲೇ. ವಿಭಿನ್ನ ಸಂಪ್ರದಾಯಗಳು, ಆಧ್ಯಾತ್ಮಿಕ ತತ್ತ್ವಕ್ಕೆ ಹೆಚ್ಚು ಕಡಿಮೆ ಸಮರ್ಪಕವೆನಿಸಿದ, ತಾತ್ಕಾಲಿಕ ಜೋಡಣೆಗಳಷ್ಟೇ. ಮಾನವ ಚೇತನವು ಒಂದೇ ಆಧ್ಯಾತ್ಮಿಕ ತತ್ತ್ವಕ್ಕೆ ಹಾತೊರೆಯುವುದು.'[೨೨] ವಿಶಾಲ ಮನೋಭಾವ ಬೆಳೆಸಿಕೊಂಡಿದ್ದ ಡಾ. ರಾಧಾಕೃಷ್ಣನ್‌ರು ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ದೇಶಗಳನ್ನರಿತು ಇಡೀ ಮಾನವಕುಲದ ಮಾನವ ಚೇತನದ ಧ್ಯೇಯವನ್ನು ಮೇಲಣ ಒಂದೇ ವಾಕ್ಯದಲ್ಲಿ ಮನಂಬುಗುವಂತೆ ತಿಳಿಸಿದ್ದಾರೆ.

ಅವರು ಮುಂದುವರೆದು ತಿಳಿಸುತ್ತಾರೆ- 'ನಾನಾ ಧರ್ಮಗಳ ಸಿದ್ಧಾಂತಗಳಿಗೂ ಪರಸ್ಪರವಾಗಿ ಎಷ್ಟೇಷ್ಟೋ ವ್ಯತ್ಯಾಸಗಳಿದ್ದರೂ, ಶಾಶ್ವತವಾದ ಮಹಾಚೇತನವೊಂದಿದೆ

---

೨೦. Ibid, p. 25

೨೧. The Heart Hindusthan, p. 3

೨೨. ಧರ್ಮದಲ್ಲಿ ಪೂರ್ವ ಮತ್ತು ಪಶ್ಚಿಮ, ೧೯೬೮ ಪು. ೧೫

ಎಂಬ ವಿಚಾರದಲ್ಲಿ ಮಾತ್ರ ಭಿನ್ನಾಭಿಪ್ರಾಯವೇ ಇಲ್ಲ. ಎಲ್ಲ ಸಿದ್ಧಾಂತಗಳೂ ಆ ಮಹಾಚೇತನವೊಂದಿದೆಯೆಂದೂ, ಅದರ ಸ್ವರೂಪವು ಹೇಗಿದೆಯೆಂಬುನ್ನು ಇದುವರೆಗೆ ಯಾರೂ ವಿವರಿಸಿಲ್ಲವೆಂದೂ, ಮುಂದೆ ಕೂಡ ಯಾರೂ ವಿವರಿಸಲಾರರೆಂದೂ ಸಾರಿ ಹೇಳಿವೆ.'[೨೩]

'ಪ್ರಪಂಚದಲ್ಲಿ ಇದುವರೆಗೆ ಏರ್ಪಟ್ಟಿರುವ ಯಾವ ಧರ್ಮವೂ ಪರಿಪೂರ್ಣವಾಗಿಲ್ಲ. ಪ್ರತಿಯೊಂದು ಧರ್ಮದಲ್ಲಿಯೂ ಗುಣದೋಷಗಳೆರಡೂ ಇವೆ. ಪ್ರತಿಯೊಂದು ಧರ್ಮವೂ ಅದನ್ನು ಅವಲಂಬಿಸಿರುವ ಜನರ ಭಾವನಾ ಸಾಮರ್ಥ್ಯ, ಅವರ ಆಧ್ಯಾತ್ಮಿಕ ಪ್ರವೃತ್ತಿ ಮತ್ತು ಅವರ ಹೆಗ್ಗುರಿ ಇವು ಮೂರರ ಪ್ರತೀಕವೆನಿಸಿ, ಇವು ಮೂರಕ್ಕೂ ಅನುಸಾರವಾಗಿರುತ್ತದೆ.'[೨೪]

ಈ ಸತ್ಯವನ್ನು ಪ್ರತಿಯೊಂದು ಧರ್ಮದ ಅನುಯಾಯಿಗಳು ಅರಿತುಕೊಳ್ಳಬೇಕಾಗಿದೆ. ಪ್ರತಿಯೊಂದು ಧರ್ಮದವರೂ ತಮ್ಮ ಧರ್ಮವೇ ಶ್ರೇಷ್ಠ ತಮ್ಮ ಧರ್ಮವೇ ಪ್ರಪಂಚದ ಉದ್ಧಾರ ಮಾಡಬಲ್ಲುದು. ಉಳಿದ ಧರ್ಮಗಳು ಕನಿಷ್ಠ ಎಂಬ ಅಸಹ್ಯಕರ ಭಾವನೆಗಳನ್ನು ಬೆಳೆಸಿಕೊಂಡಿರುತ್ತಾರೆ. ಈ ದುರಭಿಮಾನ, ಅಂಧಾಭಿಮಾನ ಖಂಡಿತವಾಗಿಯೂ ಯಾವ ಧರ್ಮಕ್ಕೂ ಸಲ್ಲದು ಎಂಬುದನ್ನು ಮನಗಾಣಬೇಕಾಗಿದೆ.

ಇದನ್ನರಿತ ಸುಜ್ಞಾನಿ ರಾಧಾಕೃಷ್ಣನ್‌ರು ಧರ್ಮ ಕುರಿತು 'ಧರ್ಮವೆನ್ನುವುದು ಒಂದು ಚಲನೆ, ಒಂದು ಬೆಳವಣಿಗೆ; ಎಲ್ಲ ಬೆಳವಣಿಗೆಯೂ ಹಳೆಯದರ ಮೇಲೆ ಹೊಸದು ನಿಂತೇ ಆಗುತ್ತದೆ. ಪ್ರತಿಯೊಂದು ಧರ್ಮದಲ್ಲಿಯೂ ಹಳೆಗಾಲದಿಂದ ಉಳಿದು ಬಂದ ವಿವರಗಳಿರುತ್ತವೆ'[೨೫] ಎಂದಿದ್ದಾರೆ.

ಆದ್ದರಿಂದ ವಿಶೇಷವಾಗಿ ಭಾರತದಲ್ಲಿ ಉಗಮ ಹೊಂದಿದ ಸ್ವತಂತ್ರ ಧರ್ಮಗಳಾದ ಜೈನ, ಬೌದ್ಧ, ಲಿಂಗವಂತ, ಸೀಖ ಮುಂತಾದ ಧರ್ಮಗಳು ತಮ್ಮ ಹಿಂದಳ ಸಹಸ್ರಾರು ವರುಷಗಳ ಧರ್ಮ-ಸಂಸ್ಕೃತಿಗಳ ಸಾರವನ್ನು ಸತ್ವವನ್ನು ಸ್ವೀಕರಿಸಿ ತಮ್ಮ ಸಮಕಾಲೀನ ಜೀವನಕ್ಕೆ ಆಧರಿಸಿ ಹೊಸ ವಿಚಾರಗಳನ್ನು ನೀಡಿದುದನ್ನು ಇಲ್ಲಿ ನಾವು ಕಾಣುತ್ತೇವೆ.

ಇನ್ನು ಕೆಲವರು, ಮಾನವ ಕುಲಕ್ಕೆ ಒಂದೇ ಧರ್ಮ ಬೇಕು ಎಂದು ಅತಿರೇಕ ವಾದವನ್ನು ಮಂಡಿಸುತ್ತ, ವಿಪರೀತ ವಿತಂಡವಾದವನ್ನು ಬಿತ್ತರಿಸುತ್ತಿರುವುದನ್ನೂ

---

೨೩. ಕಲ್ಕಿ ಅಥವಾ ನಾಗರಿಕತೆಯ ಭವಿಷ್ಯ, ಪು.೯೫,೯೬

೨೪. ಅದೇ ಪು. ೯೬

೨೫. ಧರ್ಮದಲ್ಲಿ ಪೂರ್ವ ಮತ್ತು ಪಶ್ಚಿಮ, ಪು, ೧೬

ಡಾ. ರಾಧಾಕೃಷ್ಣನ್ನರು ಒಪ್ಪುವುದಿಲ್ಲ. ಅವರು ಈ ಬಗ್ಗೆ ಸ್ಪಷ್ಟವಾಗಿ ಎಚ್ಚರಿಸುತ್ತಾರೆ. 'ಇಡೀ ಮಾನವ ವರ್ಗಕ್ಕೆ ಒಂದೇ ಒಂದು ಧರ್ಮವು ಏರ್ಪಟ್ಟರೆ, ವೈವಿಧ್ಯವೇ ಇಲ್ಲದೇ ಆಧ್ಯಾತ್ಮಿಕ ಸಂಪತ್ತೇ ಕಡಿಮೆಯಾಗುತ್ತದೆ. ಮಾನವನ ಮನಸ್ಸು ಬರಡಾಗುತ್ತದೆ. ಇಡೀ ಮಾನವ ಕುಲದ ಅಂತಃಕರಣವು ಮೇಲ್ಮೆಯನ್ನು ಸಾಧಿಸುವುದಕ್ಕೆ ಹೆಚ್ಚಿನ ಅವಕಾಶವಿಲ್ಲದೆ ನಿಲುಗಡೆಗೆ ಬರುತ್ತದೆ.'[೨೬]

ಈ ಸತ್ಯವನ್ನೂ ಇಂದಿನ ಮಾನವ ಜನಾಂಗ ಅರಿತುಕೊಳ್ಳಬೇಕಾಗಿದೆ. ತನ್ನದೊಂದು ಧರ್ಮ ಮಾತ್ರ ಶ್ರೇಷ್ಠ. ಇನ್ನಿತರ ಧರ್ಮಗಳು ಕೀಳು ಎಂಬ ಭಾವನೆ ತಾಳುವುದು ಹೇಯವಾಗಿದೆ. ಆದರೆ ಯಾವುದೇ ತೆರನಾದ ಧಾರ್ಮಿಕ ಶೋಷಣೆ ಯಾವ ಧರ್ಮದಲ್ಲಿದ್ದರೂ ಅದು ಕೆಟ್ಟದ್ದೆಂಬುದನ್ನು ಮರೆಯಬಾರದು.

ಮ್ಯಾಕ್ಸ್ ಮುಲ್ಲರ್ ಎಂಬ ಮಹಾವಿದ್ವಾಂಸರೂ ಸಹ ಈ ಕುರಿತು ಹೇಳುತ್ತಾರೆ. 'ವಿಶ್ವದ ಒಂದೊಂದು ಮಹಾಧರ್ಮದಲ್ಲಿಯೂ ದೈವಿ ಸತ್ವವಿದೆ. ಉಳಿದ ಮತ ಧರ್ಮಗಳೂ ಭಗವಂತನ ಸೃಷ್ಟಿಯೇ ಆದುದರಿಂದ ಅವನ್ನು ಸೈತಾನನ ಸೃಷ್ಟಿಯೆನ್ನುವುದು ಅಕ್ಷಮ್ಯ ಅಪರಾಧವೆಂದು ತಿಳಿಯುತ್ತೇನೆ.'[೨೭]

ಈ ಮಾತನ್ನು ಒಪ್ಪಿಕೊಂಡು ಎತ್ತಿ ಹಿಡಿದು ಹೇಳುವ ಡಾ. ರಾಧಾಕೃಷ್ಣನ್‌ರು 'ಸತ್ಯ ಶುಭ ಆಗಿರುವುದೆಲ್ಲ ಭಗವಂತನಿಂದಲೇ ಬಂದುದು ಎಂಬ ವಿಶ್ವಾಸದಿಂದ, ಧರ್ಮವನ್ನು ಅನುಸರಿಸುವ ನಾವು ಎಲ್ಲೆಲ್ಲಿ ಸತ್ಯ ಮತ್ತು ಶುಭ ಕಂಡರೂ ಅವನ್ನು ಕಂಡುಕೊಂಡು ಸಂತೋಷ ಪಡಬೇಕು. ಅದು ನಮ್ಮ ಕರ್ತವ್ಯ'[೨೮] ಎಂದು ತಿಳಿಯಪಡಿಸುತ್ತಾರೆ.

**ಧರ್ಮದ** ಬಗ್ಗೆ ಇಂದಿನ ಆಧುನಿಕ ಜನತೆಯಲ್ಲಿ ಬಹಳಷ್ಟು ತಪ್ಪು ಕಲ್ಪನೆಗಳು ಬೆಳೆದು ಬಂದಿವೆ. ಕೆಲವು ಜನ ವಿಚಾರವಾದಿಗಳಲ್ಲಂತೂ ಧರ್ಮವೆಂಬುದು ಅಫೀಮು ಇದ್ದಂತೆ. ಅದನ್ನು ಸ್ವೀಕರಿಸಿದವರೆಲ್ಲರೂ ಮತ್ತರಾಗುತ್ತಾರೆ ಎನ್ನುವಷ್ಟರ ಮಟ್ಟಿಗೂ ಧರ್ಮದ ಕುರಿತು ಅಭಿಪ್ರಾಯ ವ್ಯಕ್ತಗೊಂಡಿವೆ. ಈ ಅಭಿಪ್ರಾಯವನ್ನು ಹುಚ್ಚುತನದ್ದೆಂದು ತಳ್ಳಿ ಹಾಕುವಂತೆಯೂ ಇಲ್ಲ. ಯಾಕೆಂದರೆ ಇಂದು ಪ್ರಪಂಚದಲ್ಲಿ ನಡೆಯುತ್ತಿರುವ ಬಹಳಷ್ಟು ಹಿಂಸೆ-ಸುಲಿಗೆ-ಕೊಲೆ-ಯುದ್ಧ-ಅಶಾಂತಿಗಳೆಲ್ಲವೂ ಧರ್ಮ-ದೇವರು-ದೇವಾಲಯ-ಮಸೀದೆ-ಚರ್ಚು-ಮಠ ಮುಂತಾದವುಗಳ ಸ್ವಾರ್ಥ ಹಿತಾಸಕ್ತಿಯ ಪ್ರಚೋದನೆಯಿಂದಲೇ

೨೬. ಕಲ್ಕಿ ಅಥವಾ ನಾಗರಿಕತೆಯ ಭವಿಷ್ಯ ಪು. ೯೭
೨೭. The Life and Letters of Frederic Max Mullar Vol ii p. 464
೨೮. ಧರ್ಮದಲ್ಲಿ ಪೂರ್ವ ಮತ್ತು ಪಶ್ಚಿಮ, ೧೯೬೮ ಪು. ೩೧

ಎಂಬುದನ್ನೂ ಅಲ್ಲಗಳೆಯಲಾಗದು. ಆದರೆ ಧರ್ಮದ ಹೊರಮುಖದ ಪರಿಚಯ ಸ್ವಾರ್ಥಿ ಪುರೋಹಿತವರ್ಗದಿಂದ ಕಂಡುಬಂದರೆ, ಧರ್ಮದ ಒಳಮುಖದ ಪರಿಚಯ ಶಾಂತಿ-ಸಮಾಧಾನ-ಸಹಬಾಳ್ವೆ-ದಯೆ-ಅಹಿಂಸೆ-ಪ್ರೇಮದಲ್ಲಿ ಕಂಡುಬರುತ್ತದೆ.

ಡಾ. ರಾಧಾಕೃಷ್ಣನ್‌ರು ಈ ಕುರಿತು ಸ್ಪಷ್ಟವಾಗಿ ಹೇಳುತ್ತಾರೆ. 'ಗೊಡ್ಡು ನಂಬಿಕೆಗೂ, ನಾಸ್ತಿಕತೆಗೂ ಎರಡಕ್ಕೂ ಉತ್ತಮ ಭವಿಷ್ಯವಿಲ್ಲ.' ಏಕೆಂದರೆ ಅವೆರಡೂ ಊರ್ಜಿತವಾಗಲಾರವು. ಧರ್ಮವೇ ಬೇಡವೆಂದುಬಿಡುವುದೆಂದಿಗೂ ಸಾಧ್ಯವಿಲ್ಲ. ಯಾಕೆಂದರೆ ಅಗೋಚರ ಸತ್ಯವೂ ಶಾಶ್ವತವೂ ಎನಿಸಿರುವ ಅದ್ಭುತವಾದ ವಿಶ್ವಶಕ್ತಿಯೊಂದಿದೆ. ಆಸ್ತಿಕರು ಪರಮಾತ್ಮನೆಂದು ಕರೆಯುವುದು ಅದನ್ನೇ. ಅದರ ಸಾಕ್ಷಾತ್ಕಾರವು ಅವಶ್ಯವೆಂದು ಮಾನವ ಜೀವವು ಹಾತೊರೆಯುತ್ತದೆ. ಹೀಗಿರುವಲ್ಲಿ ಧರ್ಮವು ಬೇಡವೆಂದು ಬಿಡುವುದಾದರೂ ಹೇಗೆ?......ಧಾರ್ಮಿಕ ತತ್ತ್ವಗಳನ್ನು ಸಂದೇಹಗಳಿಗೆ ಆಸ್ಪದವಿಲ್ಲದಂತೆ ತೃಪ್ತಿಕರವಾಗಿ ಈಗಿನ ಸನ್ನಿವೇಶಗಳಿಗೆ ತಕ್ಕಂತೆ ನೂತನ ರೀತಿಯಲ್ಲಿ ಜೋಡಣೆಗೊಳಿಸಿ ಅಳವಡಿಸುವುದು ಮಾತ್ರವೇ ಈಗ ಅಗತ್ಯವಾಗಿ ನಡೆಯಬೇಕಾಗಿರುವ ಕೆಲಸ.'[೨೯]

ಇಂದಿನದು ವೈಜ್ಞಾನಿಕ ಯುಗ, ವಿಜ್ಞಾನದ ಬೆಳವಣಿಗೆ ಸಾಧನೆಯಿಂದಾಗಿ ಹಲವಾರು ಧಾರ್ಮಿಕ ನಂಬಿಕೆಗಳು ಅಲ್ಲಾಡಿವೆ. ನಿಷ್ಪ್ರಯೋಜಕವೆನಿಸಿವೆ. ಆದರೆ ಸ್ವತಃ ವಿಶ್ವದ ಶ್ರೇಷ್ಠ ವಿಜ್ಞಾನಿ ಐನ್‌ಸ್ಟೇನ್ ಅವರು ವಿಶ್ವಶಕ್ತಿಯ ಬಗ್ಗೆ ಹೇಳಿರುವುದನ್ನು ಇಲ್ಲಿ ಗಮನಿಸಬೇಕಾಗಿದೆ. 'When I look at this world. I can not escape from the feeling that there is an eternal cosmic mystery behind it.'[೩೦] ಅಂದರೆ ಯಾವಾಗ ನಾನು ಈ ಜಗತ್ತಿನೆಡೆಗೆ ನೋಡುತ್ತೇನೆಯೋ ಆಗ ನಾನು ಶಾಶ್ವತವಾದ, ಅನಾದ್ಯನಂತವಾದ ರಹಸ್ಯ ವಿಶ್ವಚೈತನ್ಯದ ಭಾವನೆಗಳಿಂದ ಪಾರಾಗಲಾರೆನು ಎಂದಿದ್ದಾರೆ. ಆದ್ದರಿಂದ ಈ ಸತ್ಯವನ್ನು ತಿಳಿಯಪಡಿಸುವ, ರಹಸ್ಯವನ್ನು ಅನುಭವಕ್ಕೆ ತಂದು ಕೊಡುವ ಧರ್ಮವನ್ನು ಅಲ್ಲಗಳೆಯಲಾಗದು ಎನ್ನುತ್ತಾರೆ ಡಾ. ರಾಧಾಕೃಷ್ಣನ್‌ರು.

ಡಾ. ರಾಧಾಕೃಷ್ಣನ್‌ರು ತತ್ತ್ವಜ್ಞಾನಿಯಾಗಿ ಧರ್ಮ ವಿಜ್ಞಾನಗಳೆರಡನ್ನೂ ಒಪ್ಪಿಕೊಳ್ಳುತ್ತಾರೆ. ಎರಡರ ಕಾರ್ಯವನ್ನೂ ಮೆಚ್ಚಿಕೊಂಡು ಸ್ವೀಕರಿಸುತ್ತಾರೆ. ಅವರು ತಿಳಿಸುವಂತೆ ಪ್ರಪಂಚದ ರಚನೆ ವಿಜ್ಞಾನಕ್ಕೆ ಸಂಬಂಧಿಸಿದ ವಿಚಾರ, 'ಪ್ರಪಂಚದ ರಹಸ್ಯ ಧರ್ಮಕ್ಕೆ ಸಂಬಂಧಿಸಿದ ವಿಚಾರ'[೩೧] ಎಂಬುದನ್ನರಿಯಬೇಕು.

---

೨೯. ಕಲ್ಕಿ ಅಥವಾ ನಾಗರಿಕತೆಯ ಭವಿಷ್ಯ, ಪುಟ ೪೯

೩೦. True Knowledge, p 25

೩೧. ಧರ್ಮದಲ್ಲಿ ಪೂರ್ವ ಮತ್ತು ಪಶ್ಚಿಮ, ಪು. ೬೧

ಧರ್ಮ ಮತ್ತು ವಿಜ್ಞಾನಗಳ ಕಾರ್ಯ ವಿಧಾನವನ್ನೂ ಅವುಗಳ ಪರಿಮಿತಿಯನ್ನು ನಾವು ಸರಿಯಾಗಿ ಅರಿತುಕೊಳ್ಳಬೇಕೆಂದು ಡಾ. ರಾಧಾಕೃಷ್ಣನ್ ತಿಳಿಸುತ್ತ 'ಪ್ರಪಂಚದ ಸೃಷ್ಟಿಯ ಆದಿ ಕಾರಣವೇನು? ಪ್ರಪಂಚವು ಸೃಷ್ಟಿಯಾಗಿರುವ ಉದ್ದೇಶವೇನು? ಪರಿಣಾಮದಲ್ಲಿ ಕೊನೆಗೆ ಪ್ರಪಂಚದ ಗತಿಯೇನು? ವಿಶ್ವಕ್ಕೆ ಆಧಾರವಾಗಿರುವ ಮಹಾಚೇತನವಿದೆಯೇ? ಎಂಬಿವೇ ಮುಂತಾದ ಮೂಲ ಸಮಸ್ಯೆಗಳಿಗೂ ವಿಜ್ಞಾನಕ್ಕೂ ಸಂಬಂಧವೇ ಇಲ್ಲ. ಈ ಮೂಲ ಸಮಸ್ಯೆಗಳನ್ನು ವಿಚಾರ ಮಾಡಿ ಬಗೆಹರಿಸುವ ಕೆಲಸವನ್ನು ಧರ್ಮಶಾಸ್ತ್ರ ಮುಂತಾದವುಗಳಿಗೆ ಬಿಟ್ಟು ತನ್ನ ಪರಿಮಿತಿಯಲ್ಲಿ ಮಾತ್ರವೇ ವಿಜ್ಞಾನವು ಕೆಲಸ ಮಾಡುತ್ತಿದೆ. ವಿಶ್ವದ ಬಾಹ್ಯ ಸ್ವರೂಪ, ಭೂಮಿಯೇ ಮುಂತಾದ ಗ್ರಹಗಳ ಮತ್ತು ಉಪಗ್ರಹಗಳ ಚಲನ, ಅವುಗಳ ಆಕರ್ಷಣ ಶಕ್ತಿ, ಜೀವಿಗಳ ಸ್ವಭಾವ. ಆಚೇತನ ವಸ್ತುಗಳ ಗುಣ. ಅಣುಪರಮಾಣುಗಳ ರಚನೆ ಮತ್ತು ಲಕ್ಷಣ, ಪ್ರಕೃತಿಯ ನಿಯಮಗಳು ಮುಂತಾದವುಗಳಿಗೆ ಸಂಬಂಧಪಟ್ಟ ನಾನಾ ಸಂಗತಿಗಳನ್ನು ಯಂತ್ರೋಪಕರಣಗಳ ಮತ್ತು ಪ್ರಯೋಗ ಪರೀಕ್ಷೆಗಳ ಮೂಲಕ ನಿರ್ಧರಿಸುವ ಕೆಲಸಕ್ಕೆ ಮಾತ್ರವೇ ವಿಜ್ಞಾನವು ಗಮನಕೊಡುತ್ತದೆ. ಈ ಪರಿಮಿತಿಗೆ ಒಳಪಟ್ಟು ವಿಜ್ಞಾನ ಸಂಶೋಧನೆಗಳು ನಡೆಯುತ್ತ ಬಂದಿವೆ'.[೩೨]

ಆದ್ದರಿಂದ ವಿಜ್ಞಾನ ಮತ್ತು ಧರ್ಮಗಳು ಒಂದಕ್ಕೊಂದು ವಿರೋಧವೆಂದು ಭಾವಿಸಬೇಕಾಗಿಲ್ಲ. ಅವುಗಳ ಕಾರ್ಯವ್ಯಾಪ್ತಿಯು ಬೇರೆ ಬೇರೆಯೇ ಆಗಿದೆ. ಎರಡೂ ಮಾನವನ ಒಟ್ಟು ಪ್ರಗತಿಗೆ ವಿಕಾಸಕ್ಕೆ ಅವಶ್ಯವಾಗಿವೆ. ಪ್ರತಿಯೊಂದು ವಸ್ತುವಿಗೂ ಬಾಹ್ಯ ಸ್ವರೂಪದೊಂದಿಗೆ ಅಂತಃಸತ್ವವೂ ಇದೆ. ಅವೆರಡನ್ನೂ ಉಪಯೋಗಿಸಿಕೊಳ್ಳುವ ಜಾಣ್ಮೆ ಮಾನವನಲ್ಲಿರಬೇಕು.

'ಧರ್ಮವೆಂಬುದು ಸಂಸ್ಕೃತಿಯ ಅಂತಃಸತ್ವ. ಸಾಮಾಜಿಕ ಸಂಘಟನೆಯೆಂಬ ದೇಹಕ್ಕೆ ಜೀವವಿದ್ದಂತೆ. ವೈಜ್ಞಾನಿಕ ಉಪಯೋಗಗಳು. ಆರ್ಥಿಕ ವ್ಯವಸ್ಥೆಗಳು, ರಾಜಕಾರಣ ಸಂಸ್ಥೆಗಳು, ಇವೆಲ್ಲ ಜಗತ್ತನ್ನು ಬಾಹ್ಯದಲ್ಲಿ ಸಂಘಟಿಸಬಲ್ಲವು; ಆದರೆ ದೃಢವಾದ, ಚಿರಂತನವಾದ ಏಕತಾನವಾಗಬೇಕಾದರೆ ಭಾವನೆಗಳ, ಆದರ್ಶಗಳ ಬಾಂಧವ್ಯವನ್ನು ದೃಢಪಡಿಸಬೇಕು. ಮಾನವ ಕೋಟಿಯ ಮನೆಯನ್ನು ಕಟ್ಟುವ ಕೆಲಸದಲ್ಲಿ ವಿಜ್ಞಾನದಷ್ಟೇ ಧರ್ಮದ ಪಾತ್ರವೂ

---

೩೨. ಕಲ್ಕಿ ಅಥವಾ ನಾಗರಿಕತೆಯ ಭವಿಷ್ಯ, ಪು. ೯೧

೩೩. ಧರ್ಮದಲ್ಲಿ ಪೂರ್ವ ಮತ್ತು ಪಶ್ಚಿಮ , ೧೯೬೮, ಪು. ೩೮

ಮುಖ್ಯವಾದುದು'[೩೩] ಎಂದು ಡಾ. ರಾಧಾಕೃಷ್ಣನ್‌ರು ಮನಂಬುಗುವಂತೆ ತಿಳಿಯಪಡಿಸುತ್ತಾರೆ. ಇದಲ್ಲದೇ ಮುಂದುವರೆದು 'ಮಾನವ ವ್ಯಕ್ತಿಯು ದೇಹ, ಮನಸ್ಸು, ಚೇತನಗಳ ಸಮಷ್ಟಿ, ಒಂದಕ್ಕೊಂದು ಅದರದರ ಆಹಾರ ಅಗತ್ಯ, ಆಹಾರ ಮತ್ತು ವ್ಯಾಯಾಮದಿಂದ ದೇಹ ಸಮರ್ಪಕವಾಗುತ್ತದೆ; ವಿಜ್ಞಾನ ಮತ್ತು ವಿಮರ್ಶೆಯಿಂದ ಮನಸ್ಸು, ಬುದ್ಧಿ ಪುಷ್ಟವಾಗುತ್ತದೆ; ಕಲೆ, ಸಾಹಿತ್ಯ. ದರ್ಶನ, ಧರ್ಮ ಇವುಗಳಿಂದ ಚೇತನ ಪ್ರಬುದ್ಧವಾಗುತ್ತದೆ'[೩೪] ಎಂದು ಸ್ಪಷ್ಟಪಡಿಸುತ್ತಾರೆ.

**ಧರ್ಮದಲ್ಲಿ ಇಂದು ನೂರಾರು ಮೂಢನಂಬಿಕೆಗಳು,** ಅಂಧ ಶ್ರದ್ಧೆಗಳು, ಕಂದಾಚಾರಗಳು ತುಂಬಿಕೊಂಡಿವೆ. ಧಾರ್ಮಿಕ ಆಚರಣೆಗಳು, ಹಬ್ಬಗಳು ಅಂತಃಸ್ಸತ್ವ ಕಳೆದುಕೊಂಡು ಕೇವಲ ಆಡಂಬರದ, ಡಾಂಭಿಕ ಪ್ರದರ್ಶನಗಳಾಗಹತ್ತಿವೆ. ಇದರಿಂದ ಕುಟುಂಬ-ಸಮಾಜ-ರಾಷ್ಟ್ರಗಳ ಸಂಪತ್ತು, ಕೆಲಸದ ಸಮಯ ಹಾಳಾಗುತ್ತಿದೆ. ಸಹಸ್ರಾರು ಕೋಟಿ ರೂ.ಗಳು ನಿರರ್ಥಕವಾಗಿ ಅಪವ್ಯಯವಾಗುತ್ತಿವೆ. ಹೋಳಿಹುಣ್ಣಿಮೆಯ ಕಟ್ಟಿಗೆ ಸುಡುವದಗಾಲೀ, ಗಜಾನನೋತ್ಸವದ ಆಡಂಬರವಾಗಲೀ, ನಾಗಪಂಚಮಿ ಹಾಲಿನ ವ್ಯರ್ಥ ಹಾಳಾಗುವಿಕೆಯಾಗಲೀ, ದೀಪಾವಳಿಯ ಖಾದ್ಯ ತೈಲ ಉರಿಯುವಿಕೆಯಾಗಲೀ ಇನ್ನೂ ಹೀಗೆಯೇ ನೂರಾರು ಆಚರಣೆಗಳು ಇಂದು ನಮ್ಮ ಆರ್ಥಿಕ ಮುಗ್ಗಟ್ಟಿಗೆ ಕಾರಣವಾಗತೊಡಗಿರುವುದು ಪ್ರತಿಯೊಬ್ಬ ಪ್ರಜ್ಞಾವಂತರ ಗಮನಕ್ಕೆ ಬರುತ್ತಿದೆ.

ಡಾ. ರಾಧಾಕೃಷ್ಣನ್‌ರು ಮೂಢನಂಬಿಕೆ-ಕಂದಾಚಾರಗಳ ವಿರುದ್ಧ ಹೋರಾಡಲು ಕರೆ ನೀಡಿದ್ದಾರೆ. 'We must use our reason to, to fight the superstitious beliefs and practices which have crept in to religion."[೩೫]

ಇದಲ್ಲದೇ ಇನ್ನೂ ಮುಂದುವರೆದು ಈ ಬಗ್ಗೆ ಎಚ್ಚರಿಸುತ್ತಾರೆ. 'ನಾವು ಕಷ್ಟ ಅನುಭವಿಸಲು ಹಿಂಜರಿಯುವುದಿಲ್ಲ. ಆದರೆ ಮೂಢನಂಬಿಕೆಗಾಗಿ ಕಷ್ಟವನ್ನು ಬಿಡುವಷ್ಟು ಧೈರ್ಯ ನಮಗಿಲ್ಲ. ಹಳೆಯ ಸಂಪ್ರದಾಯಗಳನ್ನು ಬಿಡುವ ಧೈರ್ಯವಿಲ್ಲ. ಅವು ಬಂಧನಗಳಾಗಿ ಬಿಟ್ಟಿವೆ. ಅವುಗಳನ್ನು ಕಿತ್ತು ಹಾಕುವುದಾಗದು. ಏಕೆಂದರೆ ಶಿಶುವಿಹಾರಗಳಿಂದ ನಮ್ಮ ದುರಭ್ಯಾಸ ಬೆಳೆಯಹತ್ತಿದೆ.'[೩೬]

---

೩೪. ಅದೇ. ಪು. ೩೮

೩೫. Present Crisis of Faith, p. 19

೩೬. ಧರ್ಮದಲ್ಲಿ ಪೂರ್ವ ಮತ್ತು ಪಶ್ಚಿಮ, ಪು. ೭೩

ಡಾ. ರಾಧಾಕೃಷ್ಣನ್‌ರ ಈ ಮಾತಿನ ಸತ್ಯತೆ ಇಂದಿನ ನಮ್ಮ ಶಿಶುವಿಹಾರ, ಪ್ರಾಥಮಿಕ-ಮಾಧ್ಯಮಿಕ ಶಾಲೆ -ಕಾಲೇಜುಗಳನ್ನು ಕಂಡಾಗ ಅರಿವಿಗೆ ಬರುತ್ತದೆ. ಎಳೆಯ ಬಾಲ ಮನಸ್ಸಿನ ಮೇಲೆ ಮೂಢನಂಬಿಕೆಗಳ ಆಚರಣೆ, ಪೂಜೆ ಪುನಸ್ಕಾರಗಳನ್ನು ಒತ್ತಾಯಪೂರ್ವಕ ತುಂಬಲಾಗುತ್ತಿದೆ. ಅದರ ಬದಲಿಗೆ ಮಕ್ಕಳಲ್ಲಿ ಪ್ರಾಮಾಣಿಕತೆ, ಸತ್ಯ ಅಹಿಂಸೆ, ಪ್ರೇಮ, ಕರ್ತವ್ಯ ನಿಷ್ಠೆ, ಸದ್ಗುಣ-ಸದ್ಭಾವನೆಗಳನ್ನು ತುಂಬಲು ಪ್ರಯತ್ನಿಸಬೇಕು.

'ನಾವು ಸಾಂಪ್ರದಾಯಿಕ ಪಾಪಕ್ಕೆ ಹೆದರಿ ನಿಜವಾದ ಪಾಪವನ್ನು ಮಾಡುತ್ತೇವೆ. ಅಗತ್ಯ ಬಿದ್ದರೆ ಸಂಪ್ರದಾಯಗಳನ್ನು ವಿರೋಧಿಸಿ ಒಳಗಿನ ಬೆಳಕಿನಂತೆ ಬಾಳುವುದೇ ಮನುಷ್ಯನ ಕರ್ತವ್ಯ'.[೩೭]

ಆದರೆ, ಸಂಪ್ರದಾಯದ ವಿರುದ್ಧ ಧ್ವನಿ ಎತ್ತುವವನಿಗೆ ಬಹುಮತದ ಅಜ್ಞಾನಿ ಸಮಾಜವು ಬಹಳ ತೊಂದರೆ ಕೊಡುತ್ತದೆ. ಈ ಕುರಿತು ಡಾ. ರಾಧಾಕೃಷ್ಣನ್‌ರು ನೇರವಾಗಿಯೇ ಹೇಳಿದ್ದಾರೆ. 'ಸಂಪ್ರದಾಯದ ವಿರುದ್ಧ ನಿಲ್ಲುವವನ ಪಾಲಿಗೆ ಬೈಗಳು, ನಿಂದನೆ, ಬಹಿಷ್ಕಾರ ಮತ್ತು ಏಕಾಂತಸ್ಥಿತಿ ಒದಗುತ್ತದೆ.'[೩೮] ಆದಾಗ್ಯೂ ಈ ಕಾರ್ಯವನ್ನು ಧರ್ಮಗುರುಗಳು, ಸಂತರು, ಶರಣರು ಮಾಡಲೇಬೇಕು. ಈ ಕುರಿತು ಡಾ. ರಾಧಾಕೃಷ್ಣನ್‌ರು, 'ಆಧ್ಯಾತ್ಮಿಕ ಸಿದ್ಧಿಯನ್ನು ಪಡೆದ ಪ್ರಾಜ್ಞರು ತಾವು ಅದನ್ನು ಗಳಿಸಿದುದೇ ಸಾಕೆಂದು ತೃಪ್ತರಾಗಿ ಕುಳಿತಿರಬಾರದು. ಅವರು ಕಾರ್ಯರೂಪದಲ್ಲಿ ಜನರಿಗೆ ಕರುಣೆಯನ್ನು ತೋರಿಸದೇ ಕೇವಲ ಸವಿನುಡಿಗಳಲ್ಲಿ ಸಹಾನುಭೂತಿಯನ್ನು ಸೂಚಿಸುತ್ತ ಕೈ ಕಟ್ಟಿಕೊಂಡು ಆಲಸಿಗರಾಗಿ ಕುಳಿತಿರಲೂಬಾರದು. ಅವರು ಕ್ರಿಯಾಶೀಲರಾಗಿ ಇತರರಿಗೆ ತಮ್ಮಿಂದ ಸಾಧ್ಯವಿರುವ ಸೇವೆಯನ್ನು ಸಲ್ಲಿಸಬೇಕು. ಅವರು ಪರೋಪಕಾರಕ್ಕಾಗಿ ನಿರಂತರವೂ ಶ್ರಮಿಸಬೇಕು'[೩೯] ಎಂದು ಆಗ್ರಹಿಸಿದ್ದಾರೆ.

**ಸ್ವರ್ಗ -ನರಕ,** ಪಾಪ-ಪುಣ್ಯಗಳ ಕುರಿತಾಗಿರುವ ತಪ್ಪು ಕಲ್ಪನೆಗಳನ್ನು ಡಾ. ರಾಧಾಕೃಷ್ಣನ್ ಹೊಡೆದು ಹಾಕುತ್ತಾರೆ. 'Heaven and hell are not physical areas. A soul tormented with remorse for its deeds is in hell, a soul with the satisfaction of a life well Lived is in heaven.'[೪೦]

---

೩೭. ಅದೇ. ಪು. ೭೪

೩೮. ಧರ್ಮದಲ್ಲಿ ಪೂವ ಮತ್ತು ಪಶ್ಚಿಮ, ಪು. ೧೮೮

೩೯. ಕಲ್ಕಿ ಅಥವಾ ನಾಗರಿಕತೆಯ ಭವಿಷ್ಯ, ಪು. ೧೧೪

೪೦. The Present Crisis of Faith, p. 19

ಈ ವಿಚಾರ ಓದಿದಾಗ ೮೦೦ ವರ್ಷಗಳ ಹಿಂದೆಯೇ ಹೇಳಿದ ಭಾರತದ ಪ್ರಪ್ರಥಮ ಸ್ವತಂತ್ರ ವಿಚಾರವಾದಿ ಬಸವಣ್ಣನವರ ವಚನ ಸಂದೇಶ 'ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ, ಆಚಾರವೇ ಸ್ವರ್ಗ, ಅನಾಚಾರವೇ ನರಕ' ಎಂಬುದು ಜ್ಞಾಪಕಕ್ಕೆ ಬರುತ್ತದೆ.

ಧರ್ಮ ಕುರಿತು ಡಾ. ರಾಧಾಕೃಷ್ಣನ್‌ರು ಸುಪ್ರಸಿದ್ಧ ಅನುಭಾವಿ ತತ್ತ್ವಜ್ಞಾನಿ ಡಾ. ಎ.ಎನ್. ವೈಟ್‌ಹೆಡ್‌ರ ವಿಚಾರಗಳನ್ನು ಎತ್ತಿ ಹೇಳುತ್ತಾರೆ - 'Religion is a force of belief cleaning the inward Parts. For this reason the primery religious Virtue is Sincerity, a Penetrating sincerity. Religion is the art and theory of the internal life of man.'[೪೧] ಧರ್ಮವೆಂಬುದು ಅಂತರಂಗ ಶುದ್ಧಿಯ ಶಕ್ತಿಯಾಗಿದೆ. ಆದರ ಮೂಲಭೂತ ಗುಣವೆಂದರೆ ಪ್ರಾಮಾಣಿಕತೆ, ಅಂತಶುದ್ಧಿಯು, ಮಾನವನ ಅಂತರಂಗ ಜೀವನದ ಕಲೆ ಮತ್ತು ತತ್ತ್ವವೇ ಧರ್ಮವಾಗಿದೆ.

ಧರ್ಮದ ಅಂತಿಮ ಧ್ಯೇಯವು ಏನೆಂಬುದನ್ನು ಅರಿತುಕೊಳ್ಳಬೇಕಾಗಿದೆ. 'ಧರ್ಮವು ಹಲವಾರು ಭಾಷೆಗಳಲ್ಲಿ ಮಾತನಾಡುತ್ತದೆ. ಅದರ ಬಣ್ಣ ವಿಭಿನ್ನವಾದುದು. ಆದರೂ ಅದಕ್ಕೆ ನೈಜವಾದ ಒಂದು ಧ್ವನಿ ಇದೆ. ಅದೇ ಮಾನವ ಪ್ರೀತಿ, ಅನುಕಂಪ, ದಯೆ, ಈ ಧ್ವನಿ. ನಮಗೆ ಸಾಧ್ಯವಾದಷ್ಟೂ ಪ್ರಯತ್ನ ಮಾಡಿ ಈ ಧ್ವನಿಯನ್ನು ನಾವು ಕೇಳಿಸಿಕೊಳ್ಳಬೇಕು.'[೪೨]

ಈ ಧ್ವನಿಗೆ ಪ್ರಮಾಣಗಳೇನು? ಎಂದು ಹುಡುಕಿದರೆ ನಮಗೆ ಸಿಗಲಿಕ್ಕಿಲ್ಲ ಈ ಕುರಿತು ಡಾ. ಎ. ಎನ್ ವೈಟ್ ಹೆಡ್ ತತ್ತ್ವಜ್ಞಾನಿಯು ಬಹು ಮಾರ್ಮಿಕವಾಗಿ ತಿಳಿಪಡಿಸುತ್ತಾರೆ. 'ಪಂಡಿತ ಮನದ ಲಕ್ಷಣ, ಪದಗಳಿಗೆ (ಶಬ್ದಗಳಿಗೆ) ಮಹತ್ವ ಕೊಡುವುದಾಗಿದೆ. ಆದರೆ ತಾಯಂದಿರು ತುಟಿಯಾಡಿಸಿ ಹೇಳಲಾರದ ಎಷ್ಟೋ ಭಾವನೆಗಳನ್ನು ಮನದಲ್ಲಿ ತೂಗುತ್ತಾರೆ. ಹೀಗೆ ಅನುಭವಕ್ಕೆ ಬಂದ ಇಂಥ ಭಾವಗಳು ಧರ್ಮಕ್ಕೆ ಪರಮ ಪ್ರಮಾಣಗಳು; ಅವುಗಳ ಆಚೆ ಯಾವ ಮಾತೂ ಇಲ್ಲ.'[೪೩]

ಕೊನೆಯದಾಗಿ ಡಾ. ರಾಧಾಕೃಷ್ಣನ್‌ರು ಧರ್ಮದ ಬಗ್ಗೆ ಹೇಳುವುದೆಂದರೆ 'Religion is right belief right feeling and right action. It is all the three'[೪೪] ಧರ್ಮವೆಂದರೆ ಸಮ್ಯಕ್ ಶ್ರದ್ಧೆ, ಸಮ್ಯಕ್ ಭಾವನೆ, ಸಮ್ಯಕ್

---

೪೧. An Anthology (1953), p. 172

೪೨. ಧರ್ಮದಲ್ಲಿ ಪೂರ್ವ ಮತ್ತು ಪಶ್ಚಿಮ, ಪು. ೧೧೭

೪೩. ಪ್ರಾಚ್ಯ ಮತ್ತು ಪಾಶ್ಚಾತ್ಯ ಸಂಸ್ಕೃತಿ ಪು. ೨೨೫

೪೪. The Present Crisis of faith. p. 173

ಕ್ರಿಯೆಯಾಗಿದೆ ಹಾಗೂ 'Religion is a way achieving union with that Ultimate Reality called God.'[೪೫]

ದೈವೀ ಚೇತನ ಅಂದರೆ ದೇವರೊಂದಿಗಿನ ಸಮರಸವೇ ಧರ್ಮದ ಮಾರ್ಗವಾಗಿದೆ. ಆತ್ಯಂತಿಕ ಧ್ಯೇಯವಾಗಿದೆ.

ಧರ್ಮ ಎಂಬುದು ಮಾನವನನ್ನು ಸರ್ವಾಂಗೀಣವಾಗಿ ಎತ್ತಿ ಹಿಡಿಯುವ ತತ್ತ್ವ ವಿಶೇಷವಾಗಿದೆ. ಎಲ್ಲ ಧರ್ಮಗಳ ಮೂಲಪುರುಷರ ಆಶಯವೂ ಸಹಬಾಳ್ವೆ-ಸಮಾನತೆ-ಭಾವೈಕ್ಯತೆಯೇ ಆಗಿದೆ. ಶೈವ-ವೈದಿಕ ಧರ್ಮಗಳ ಋಷಿಮುನಿಗಳೇ ಆಗಲಿ. ಜೈನ ಧರ್ಮದ ಮೂಲ ಪುರುಷ ಮಹಾವೀರ, ಬೌದ್ಧಧರ್ಮದ ಮೂಲಪುರುಷ ಬುದ್ಧ, ಇಸ್ಲಾಂ ಧರ್ಮದ ಮೂಲಪುರುಷ ಪೈಗಂಬರ, ಕ್ರಿಶ್ಚಿಯನ್ ಧರ್ಮದ ಮೂಲಪುರುಷ ಏಸು, ಲಿಂಗವಂತ ಧರ್ಮದ ಮೂಲಪುರುಷ ಬಸವಣ್ಣ, ಶೀಖ್ ಧರ್ಮದ ಮೂಲಪುರುಷ ಗುರುನಾನಕ ಹಾಗೂ ಇನ್ನಿತರ ದೇಶ ವಿದೇಶಗಳ ಸಂತರು, ಮಹಾತ್ಮರು, ಜ್ಞಾನಿಗಳು ಎಲ್ಲರೂ ತಮ್ಮ ತಮ್ಮ ಜೀವಿತಕಾಲದಲ್ಲಿ ಇಡೀ ಮಾನವ ಕಲ್ಯಾಣ ಕುರಿತು ಭಕ್ತಿ, ಪ್ರೇಮ, ಶಾಂತಿ, ಅಹಿಂಸೆ, ದಯೆ ಸಮಾನತೆಗಳನ್ನೇ ಬೋಧಿಸಿರುವರು.

ಆದ್ದರಿಂದ ಇಂದು ನಾವು ಗಮನಿಸಬೇಕಾದ ಅಂಶವೆಂದರೆ 'ಎಲ್ಲ ಧರ್ಮಗಳನ್ನು ಗೌರವಿಸು, ನಿನ್ನ ಹೃದಯ-ಮನ ಬುದ್ಧಿಗೆ ಒಪ್ಪಿತವಾದುದನ್ನು ಅನುಸರಿಸು; ಎಲ್ಲ ಧರ್ಮಗಳ ಸಾರ-ಸತ್ವವನ್ನು ಪರಿಗ್ರಹಿಸು, ಬಾಳನ್ನು ಬೆಳಗಿಸು' ಎಂದು ನಂಬಿ ನಡೆಯಬೇಕಾಗಿದೆ. ಧರ್ಮವೆಂಬುದು ಮಾನವ ಬಾಳಿನ ಬೆಳಕೇ ಹೊರತು ಕತ್ತಲೆಯಲ್ಲ. ಅದನ್ನು ಕತ್ತಲೆಯಾಗಿಸಿರುವ ಸ್ವಾರ್ಥಿ ಧರ್ಮಾಂಧರ ಬಗ್ಗೆ ಎಚ್ಚರಾಗಿರಬೇಕಾಗಿದೆ. 'ಮಾನವಕುಲ ಒಂದೇ ಮೂಲದಿಂದ ಹುಟ್ಟಿ, ಅನೇಕ ರೂಪಗಳಲ್ಲಿ ಕವಲೊಡೆದಿದೆ. ಕವಲಾಗಿ ಒಡೆದಿರುವ ಅವನ್ನು ಒಂದುಗೂಡಿಸುವ ಪ್ರಯತ್ನ ಈಗ ನಡೆಯುತ್ತಿದೆ[೪೬] ಎಂದು ರಾಧಾಕೃಷ್ಣನ್ ಹೇಳುತ್ತಾರೆ.

---

೪೫. Ibid, p. 19

೪೬. ಪ್ರಾಚ್ಯ ಮತ್ತು ಪಾಶ್ಚಾತ್ಯ ಸಂಸ್ಕೃತಿ, ಪು. ೨೩೭

# ೬. ಹಿಂದೂ ಧರ್ಮ ಕುರಿತು ಡಾ. ರಾಧಾಕೃಷ್ಣನ್‌ರ ವಿಚಾರಗಳು

ಡಾ. ರಾಧಾಕೃಷ್ಣನ್‌ರಿಗೆ 'ಹಿಂದೂ' ಧರ್ಮದ ಬಗ್ಗೆ ಅಪಾರ ಅಭಿಮಾನ, ಗೌರವ. ಅವರು 'ಹಿಂದೂ' ಎನ್ನುವುದನ್ನು ತುಂಬ ವಿಶಾಲ ಅರ್ಥದಲ್ಲಿ ಪರಿಗ್ರಹಿಸಿದವರು . ಅವರ ದೃಷ್ಟಿಯ ಹಿಂದೂ ಅರಿತುಕೊಳ್ಳಬೇಕಾದರೆ ಅವರೇ ಬರೆದಿರುವ 'The Hindu View of Life' (ಹಿಂದೂ ಜೀವನ ದರ್ಶನ) ಕೃತಿಯನ್ನು ಓದಬೇಕು. ಹಿಂದೂ ಯಾರು? ಹಿಂದೂ ಧರ್ಮ ಎಂದರೇನು? ಈ ಎರಡು ಪ್ರಶ್ನೆಗಳು ಇಂದಿನ ಸಮಕಾಲೀನ ಸಮಯದಲ್ಲಿ ಬಹಳ ಜನರ ತಲೆ ತಿನ್ನುತ್ತಿರುವ ಸಮಸ್ಯೆಗಳಾಗಿವೆ. ಹಿಂದೂ ಎನ್ನುವುದನ್ನು ಕೇವಲ ಬ್ರಾಹ್ಮಣ ಕ್ಷತ್ರಿಯ-ವೈಶ್ಯ ಜನಾಂಗದವರಿಗೇ ಸೀಮಿತಗೊಳಿಸಿದ ಧರ್ಮ ಸಂಸ್ಕಾರ ಬಳಕೆಯಲ್ಲಿದೆ. ಈ ದೇಶದ ಬಹು ಜನ ಸಮಾಜದ ಕೃಷಿಕರು, ಕೂಲಿ-ಕಾರ್ಮಿಕರು, ಕೈಕಸುಬುದಾರರು ಶೂದ್ರರೆಂಬ ಹಣೆಪಟ್ಟಿ ಅಂಟಿಸಿಕೊಂಡು ಮೇಲ್ಜಾತಿಗಳವರಿಂದ ದೌರ್ಜನ್ಯ -ಹಿಂಸೆ-ಶೋಷಣೆಗೊಳಗಾಗಿ ಬಾಳಬೇಕಾಗಿರುವ ಕಷ್ಟ-ನೋವು ಅನುಭವಿಸಬೇಕಾಗಿರುವ ಪರಿಸ್ಥಿತಿ ಸಾವಿರಾರು ವರುಷಗಳಿಂದ ಬೆಳೆಸಿಕೊಂಡು ಉಳಿಸಿಕೊಂಡು ಬರಲಾಗಿದೆ. 'ಏಕಂ ಸತ್ ವಿಪ್ರಾಬಹುಧಾ ವದಂತಿ' ಎಂದು ಹೇಳುವ, ವಿಶ್ವ ಹಿಂದವಾಃ ಸಹೋದರಃ ಎಂದು ಹೇಳುವವರು ಕೋಟ್ಯಾವಧಿ ಜನರನ್ನು ಶೂದ್ರರೆಂದು ಕರೆದು ಇಂದಿಗೂ ಅವರಿಗೆ ಗುಡಿ-ಗುಂಡಾರಗಳಲ್ಲಿ, ಮನೆ-ಮಠಗಳಲ್ಲಿ, ಊಟ-ಉಪಚಾರಗಳಲ್ಲಿ, ಧರ್ಮ-ಸಂಸ್ಕಾರಗಳಲ್ಲಿ ಸಮಾನ ಅವಕಾಶ ನೀಡಿಲ್ಲವೆಂಬುದು ಅಷ್ಟೇ ಕಟುಸತ್ಯ. ಇತ್ತೀಚೆಗೆ ಹಿಂದೂ ಧರ್ಮದ ಪುರಿ ಶಂಕರಾಚಾರ್ಯ ಸ್ವಾಮಿಗಳೊಬ್ಬರು ಹೇಳಿದ್ದರೆನ್ನಲಾದ 'ಹರಿಜನರಿಗೆ ದೇವಾಲಯ ಪ್ರವೇಶ ನಿಷೇಧಿಸಬೇಕೆಂಬ ಹೇಳಿಕೆ' ಇಡೀ ದೇಶದಾದ್ಯಂತ ಗಲಾಟೆಯನ್ನುಂಟು ಮಾಡಿ ರಾಷ್ಟ್ರೀಯ ಭಾವೈಕ್ಯತೆಗೆ ಅಪಾರ ಹಾನಿಯುಂಟು ಮಾಡಿತೆಂಬುದು ಎಲ್ಲ ಪ್ರಾಜ್ಞರ ಗಮನಕ್ಕೆ ಬಂದಿರಲು ಸಾಕು.

ಈ ಹಿನ್ನೆಲೆಯಲ್ಲಿ ರಾಧಾಕೃಷ್ಣನ್‌ರ ವಿಚಾರಗಳನ್ನು ಚಿಂತನ-ಮಂಥನ ಮಾಡಬೇಕಾಗಿದೆ. ಡಾ. ರಾಧಾಕೃಷ್ಣನ್‌ರು ಹೇಳುವಂತೆ ಸಿಂಧೂ ನದಿಯ ಪೂರ್ವ ಭಾಗಕ್ಕೆ ಸೇರಿದ ಜನರನ್ನು ಪರ್ಶಿಯನ್‌ರೂ ಮತ್ತು ಇತರ ಪಾಶ್ಚಾತ್ಯ ಆಕ್ರಮಣಕಾರರೂ ಹಿಂದುಗಳೆಂದು ಕರೆದರು.[೪೭]

---

೪೭. ಹಿಂದೂ ಜೀವನ ದರ್ಶನ (೧೯೭೦) ಪು. ೨

ಅಂದರೆ ಹಿಂದೂ ಎನ್ನುವುದು 'ಧರ್ಮ' ಎಂಬ ಹೆಸರಿನ ಪದವಾಗಲೀ, ಶಬ್ದವಾಗಲೀ, ಅಲ್ಲ. ಅದು ಸಮಗ್ರ ಜನಾಂಗವಾಚಕವಾದ ಪದವಾಯಿತು. ಸ್ವಾಮಿ ವಿವೇಕಾನಂದರು ತಿಳಿಸುವಂತೆ ಪರ್ಶಿಯನ್‌ರು 'ಸಿಂಧೂ ನದಿಯ ಮೇಲ್ಭಾಗದಲ್ಲಿ, ಆಚೆಯಲ್ಲಿ ವಾಸಿಸುವ ಜನ ಎಂದು ಹೇಳಬೇಕಾದಾಗ, ಉಚ್ಚಾರದ ತೊಂದರೆಯಿಂದಾಗಿ ಸಿಂಧೂ ಹೋಗಿ ಹಿಂದೂ ಆಯಿತು ಎಂದು ಅಭಿಪ್ರಾಯಪಡುತ್ತಾರೆ. ಕಾರಣ ಹಿಂದೂ ಎನ್ನುವ ಶಬ್ದ ಅನಂತರ ಹಾಗೇ ಬಳಕೆಯಾಗುತ್ತಾ ಬ್ರಿಟಿಶರ ಕಾಲಕ್ಕೆ ಮುಸ್ಲೀಮರು ಮತ್ತು ಮುಸ್ಲೀಮೇತರರು ಎಂದು ಗುರುತಿಸುವ ಸಲುವಾಗಿ ಮುಸ್ಲೀಮರು ಹಾಗೂ ಹಿಂದೂಗಳು ಎಂಬ ಶಬ್ದ ಹೆಚ್ಚು ಬಳಕೆಗೆ ಬಂದಿತು. ಪ್ರೊ. ಭಗವಾನರು ತನ್ನ ಗ್ರಂಥ 'ಶಂಕರಾಚಾರ್ಯ ಮತ್ತು ಪ್ರತಿಗಾಮಿತನದಲ್ಲಿ ' ಹಿಂದೂ ಧರ್ಮದ ವಿವರಣೆ ಎಂಬ ಅಧ್ಯಾಯದಲ್ಲಿ ಸ್ಪಷ್ಟವಾಗಿ ಹೀಗೆ ಹೇಳಿದ್ದಾರೆ. 'ಹಿಂದೂ ಮತ್ತು ಮುಸ್ಲಿಮರನ್ನು ವಿಂಗಡಿಸುವುದಕ್ಕಾಗಿ ಇಂಗ್ಲೀಷರು ಮುಸ್ಲೀಮೇತರರನ್ನು ಹಿಂದೂಗಳೆಂದು ಕರೆದರು. ಅವರ ಆಡಳಿತ ಕಾಲದಲ್ಲಿ ದೃಢೀಕರಣವಾಯಿತು. ಆದ್ದರಿಂದಲೇ ಹಿಂದೂಗಳು ಮತ್ತು ಹಿಂದೂ ಧರ್ಮ ಎಂದಾಯಿತು.'[೪೭ಅ] ಈ ಮುಂಚೆ ಬಳಸುತ್ತಿದ್ದ ಶಬ್ದ ವೈದಿಕ ಧರ್ಮ, ಬ್ರಾಹ್ಮಣ ಧರ್ಮ ಎಂದೇ ಬಳಕೆಯಲ್ಲಿತ್ತು. ಕಾರಣ ಅದನ್ನು ಡಾ. ರಾಧಾಕೃಷ್ಣನ್‌ರು 'ವೈದಿಕ ಸಂಸ್ಕೃತಿ ದ್ರಾವಿಡರ ಪ್ರಭಾವದಿಂದ ಹಿಂದೂ ಸಂಸ್ಕೃತಿಗೆ ಪರಿವರ್ತನೆಯಾದುದು'[೪೮] ಎಂದು ತಿಳಿಸುತ್ತಾರೆ. ಕಾರಣ ಇಂದು ಹಿಂದೂ ಎನ್ನುವುದು ತುಂಬ ಜಟಿಲವಾದ ಶಬ್ದವಾಗಿ ಜೈನರು, ಬೌದ್ಧರು, ಲಿಂಗವಂತರು, ಸೀಖರು ನಾವು ಹಿಂದೂಗಳಲ್ಲ, ಹಿಂದೂ ಧರ್ಮದವರಲ್ಲ ಎಂದು ಹೇಳಿಕೊಳ್ಳುವ ಪ್ರಸಂಗ ಒದಗಿಬಂದಿರುವುದನ್ನು ನಾವಿಂದು ಕಾಣುತ್ತಿದ್ದೇವೆ. ಇದಕ್ಕೆ ಕಾರಣವೇನು? ಕಾರಣರು ಯಾರು? ಎಂಬುದನ್ನು ಹಿಂದೂ ಧರ್ಮಪ್ರತಿಪಾದಕರು ಆತ್ಮವಿಮರ್ಶೆ ಮಾಡಿಕೊಳ್ಳಬೇಕಿದೆ.

ಆದರೆ ಡಾ. ರಾಧಾಕೃಷ್ಣನ್‌ರು ಹೇಳುವ 'ಹಿಂದೂ ಧರ್ಮ' ಎನ್ನುವ ಶಬ್ದವು ಕೇವಲ ವೈದಿಕ-ಬ್ರಾಹ್ಮಣ ಧರ್ಮಕ್ಕೆ ಸೀಮಿತವಾದುದಲ್ಲ. ಅದು ಸಮಗ್ರ ಜನಾಂಗ-ಸಂಸ್ಕೃತಿಯ ಅರ್ಥದಲ್ಲಿ ಬಳಸುವ ಪದವಾಗಿದೆ. 'ಹಿಂದೂ ಧರ್ಮವು ಒಂದು ನಿರ್ದಿಷ್ಟವಾದ ನಿರ್ಬಂಧದ ಆಚಾರ ಪಂಥವಲ್ಲ. ಅದು ವಿಸ್ತಾರವಾದ,

---

೪೭ಅ. ಶಂಕರಾಚಾರ್ಯ ಮತ್ತು ಪ್ರತಿಗಾಮಿತನ ೧೯೮೭, ಪು. ೬೦

೪೮. ಹಿಂದೂ ಜೀವನ ದರ್ಶನ ಪು. ೨೩

ಸಂಕೀರ್ಣವಾದ ಆದರೂ ಸೂಕ್ಷ್ಮ ರೀತಿಯಲ್ಲಿ ಸಮರಸಗೊಂಡ ಆಧ್ಯಾತ್ಮಿಕ ವಿಚಾರ ಮತ್ತು ಅನುಭವ. ದೇವರ ಕಡೆ ಅಭಿಮುಖವಾದ ಆತ್ಮದ ಸಾಧನೆ, ಪರಂಪರಾಗತವಾಗಿ ಕಾಲ ಕಳೆದಂತೆ ವಿಸ್ತಾರಗೊಳ್ಳುತ್ತಲೇ ಇದೆ.'[೪೯] ಹಾಗೂ ಉಚ್ಚಮಟ್ಟದ ನಾಗರಿಕತೆಯನ್ನು ಹೊಂದಿದ್ದ ದ್ರಾವಿಡರ ಸಂಪರ್ಕದಿಂದ ವೇದಮತವು ದೇವರನ್ನು ನಂಬುವ ಧರ್ಮವಾಗಿ ಪರಿವರ್ತನೆ ಹೊಂದಿತು.'[೫೦]

ಡಾ. ರಾಧಾಕೃಷ್ಣನ್‌ರ ಈ ವಿಚಾರಗಳನ್ನು ಗಮನಿಸಿದಾಗ 'ಹಿಂದೂ' ಎನ್ನುವ ಶಬ್ದದ ಐತಿಹಾಸಿಕತೆ, ಅದರ ದೃಷ್ಟಿಕೋನ ಅರಿವಿಗೆ ಬರುತ್ತದೆ. ಅವರು ಇನ್ನೊಂದೆಡೆ 'Hinduism is a process, not a result : a growing tradition, not a fixed revelation.'[೫೧] ಎಂದೂ, 'Hinduism is the symbol of India's Spiritual vision. It is based on the institution of the Oneness and wholeness of the Superme spirit.'[೫೨] ಹಿಂದೂ ಮತ ಎನ್ನುವುದು ಮುಂದುವರೆಯುತ್ತಿರುವ ವಿಧಾನವೇ ಹೊರತು ಪರಿಣಾಮವಲ್ಲ (ನಿರ್ಣಯವಲ್ಲ). ಅದೊಂದು ಬೆಳೆಯುತ್ತಿರುವ ಪರಂಪರೆಯೇ ವಿನಃ ಅದೊಂದು ಸ್ಥಿರವಾದ ವೇದದ ಅಪೌರುಷೇಯತ್ವವೇನಲ್ಲ. ಅದು ಭಾರತೀಯರ ಆಧ್ಯಾತ್ಮ ದೃಷ್ಟಿಯ ಚಿಹ್ನೆಯಾಗಿದೆ. ದೈವೀ ಚೇತನದ ಪೂರ್ಣತ್ವ-ಏಕತ್ವದ ಅಂತರ್‌ದೃಷ್ಟಿಯ ತಳಹದಿಯಾಗಿದೆ ಎಂದು ಡಾ. ರಾಧಾಕೃಷ್ಣನ್‌ರು ತಿಳಿಯಪಡಿಸುತ್ತಾರೆ.

ಇಂದು, ಹಿಂದೂ ಎನ್ನುವುದನ್ನು ವಿಶಾಲ ಅರ್ಥದಲ್ಲಿ ಗ್ರಹಿಸಬೇಕಾಗಿದೆ. ರಾಷ್ಟ್ರೀಯ ಸಮಗ್ರತೆ-ಏಕತೆಯ ದೃಷ್ಟಿಯಿಂದ ಈ ದೇಶದ ಮಣ್ಣಿನಲ್ಲಿ ಬಾಳಿ ಬದುಕುತ್ತಿರುವ ಎಲ್ಲ ಧರ್ಮ-ಮತ-ಪಂಗಡದವರನ್ನೂ ಆತ್ಮೀಯತೆಯಿಂದ ಸೌಹಾರ್ದತೆಯಿಂದ ಬಂಧಿಸಬೇಕಾಗಿದೆ. ಡಾ. ರಾಧಾಕೃಷ್ಣನ್‌ರು ಹೇಳುವಂತೆ 'Hinduism is more a way of life than a form of thought'[೫೩] ಹಿಂದೂ ಮತವೆನ್ನುವುದು ಜೀವನ ಮಾರ್ಗವೆನ್ನುವುದು ಹೆಚ್ಚು ಸೂಕ್ತ.

'Today the great religions of the world and the differant currents of thought have met on Indian soil'[೫೪] ಇಂದು ಭಾರತೀಯ

---

೪೯. ಅದೇ ಪು. ೮

೫೦. ಅದೇ. ಪು. ೯

೫೧. The Heart of Hindustan, p. 21

೫೨. Ibid, p. 51

೫೩. The Hindu View of Life, p.77

೫೪. Indian Philosophy Vol. II, p. 773

ಭೂಮಿಯ ಮೇಲೆ ಪ್ರಪಂಚದ ದೊಡ್ಡ ಧರ್ಮಗಳು ಮತ್ತು ಅನೇಕ ವಿಚಾರ ಪ್ರವಾಹಗಳು ಬಂದು ನೆಲೆಸಿವೆ. ಇಂದು ಭಾರತವು ಎಲ್ಲ ಚಿಂತನಗಳ, ಸಮೂಹಗಳ ನಾಡಾಗಿದೆ. ಹಿಂದೂ ಎನ್ನುವುದು ಇಂದು ಧರ್ಮವೆಂಬ ಸಂಕುಚಿತ ಅರ್ಥದಲ್ಲಿ ಬಳಕೆಯಾಗದೇ ಸಮಗ್ರ ಭಾರತೀಯರ ಜೀವನ ಮಾರ್ಗವಾಗಬೇಕಿದೆ ಎಂಬುದನ್ನು ಡಾ. ರಾಧಾಕೃಷ್ಣನ್‌ರು ತಿಳಿಯಪಡಿಸುತ್ತಾರೆ. ಅಲ್ಲದೇ 'ಹಿಂದೂ ಧರ್ಮ ಒಂದು ಪಂಗಡವಲ್ಲ; ಧರ್ಮದ ಕಾನೂನನ್ನು ಒಪ್ಪಿಕೊಂಡು ಸತ್ಯವನ್ನು ನಿರ್ವಂಚನೆ ಇಲ್ಲದೆ ಹುಡುಕುವವರ ಆತ್ಮೀಯ ಸಂಘ'[೫೫] ಎಂದೂ ಹೇಳಿದ್ದಾರೆ.

ಡಾ. ರಾಧಾಕೃಷ್ಣನ್‌ರು ಸಮಗ್ರ ಭಾರತೀಯ ದರ್ಶನ ಶಾಸ್ತ್ರಗಳನ್ನು ಅಧ್ಯಯನ ಚಿಂತನ ಮಾಡಿ. ವಿಶಾಲ ದೃಷ್ಟಿಕೋನ ಹೊಂದಿದವರು. ಅವರ ಹಲವಾರು ಅಭಿಪ್ರಾಯಗಳು ಕುರಿತು ಇನ್ನೂ ಹೆಚ್ಚಿನ ರೀತಿಯ ಚಿಂತನ ನಡೆಯಬೇಕಿದೆ.

---

೫೫. ಹಿಂದೂ ಜೀವನ ದರ್ಶನ, ಪು. ೫೨

# ೭ ದೇವರು ಕುರಿತು ಡಾ. ರಾಧಾಕೃಷ್ಣನ್‌ರ ವಿಚಾರಗಳು

ಡಾ. ರಾಧಾಕೃಷ್ಣನ್‌ರು 'ದೇವರು' ಕುರಿತು ಬಹಳಷ್ಟು ಚಿಂತನ ಮಾಡಿದ್ದಾರೆ. ವಿಜ್ಞಾನಯುಗದ ವೈಚಾರಿಕ ಹಿನ್ನೆಲೆಯಲ್ಲಿ ನಿಂತು ಪೌರ್ವಾತ್ಯ ಸಂಸ್ಕೃತಿಗಳಲ್ಲಿಯ ಶ್ರದ್ಧೆ-ನಂಬಿಕೆಗಳನ್ನು ವಿಮರ್ಶಿಸಿ ದೇವರು ಎಂಬುದನ್ನು ನಂಬಿದ್ದಾರೆ. ಅದಕ್ಕೊಂದು ತಾತ್ವಿಕ ಅರ್ಥವನ್ನೂ ನೀಡಿದ್ದಾರೆ. ವಿಶೇಷವಾಗಿ ಉಪನಿಷತ್ತು-ಭಗವದ್ಗೀತೆ ವೇದಾಂತ ದರ್ಶನಗಳ ಚಿಂತನದ ಸಾರವನ್ನು ಅವರು ಪರಿಗ್ರಹಿಸಿರುವುದು ಕಂಡುಬರುತ್ತದೆ.

'ವಿಶ್ವ ವ್ಯಾಪಾರಗಳಿಗೆ ಮೂಲಾಧಾರವಾದ ಮಹಾಚೇತನವೊಂದು ಹಿನ್ನೆಲೆಯಲ್ಲಿದೆ ಎಂದೇನೋ ವಿಜ್ಞಾನವು ಸಾರಿ ಹೇಳುತ್ತಿದೆ. ಆದರೆ ಭಗವಂತನು ಈ ರೂಪದಲ್ಲಿದ್ದಾನೆ, ಭಗವಂತನು ಆ ರೂಪದಲ್ಲಿದ್ದಾನೆ ಎಂದು ಮಾನವನು ಭಗವಂತನ ವಿಚಾರವಾಗಿ ಕಲ್ಪಿಸಿಕೊಂಡಿರುವ ನಾನಾ ರೂಪಗಳ ವಿಷಯವು ನಂಬಿಕೆಗೆ ಅರ್ಹವಲ್ಲವೆಂದು ವಿಜ್ಞಾನವು ಸೂಚಿಸಿದೆ. ಆ ಕಲ್ಪನೆಯನ್ನೇ ವಿಜ್ಞಾನವು ಧ್ವಂಸ ಮಾಡಿದೆ. ವಿಶ್ವದ ಹಿನ್ನೆಲೆಯಲ್ಲಿರುವ ಸರ್ವಾಧಾರವಾದ ಮಹಾಚೇತವನೇ ಭಗವಂತ. ಎಲ್ಲವನ್ನೂ ವ್ಯಾಪಿಸಿ ಅನಂತನಾಗಿರುವ ಭಗವಂತನನ್ನು ಸ್ವರ್ಗದಲ್ಲಿ ವಾಸವಾಗಿರುವ ಒಬ್ಬ ವ್ಯಕ್ತಿಯಂತೆ ಅಥವಾ ಮಡಿಕೆಗಳನ್ನು ಮಾಡುವ ಕುಂಬಾರನಂತಿರುವ ಸೃಷ್ಟಿಕರ್ತನಾದ ವ್ಯಕ್ತಿಯಂತೆ ಭಾವಿಸಿಕೊಳ್ಳುವುದು ಉಚಿತವಲ್ಲ'[೫೧] ಎಂದು ಡಾ. ರಾಧಾಕೃಷ್ಣನ್‌ರು ವಿಜ್ಞಾನದ ಚಿಂತನದ ಫಲವನ್ನು ಮುಂದಿಡುತ್ತಾರೆ.

ಅಲ್ಲದೇ, 'ಜನರು ತಮ್ಮ ತಮ್ಮ ಸಂಸ್ಕೃತಿಯ ಮಟ್ಟಕ್ಕೆ ಅನುಸಾರವಾಗಿ ಭಗವಂತನು ಹೀಗಿದ್ದಾನೆ ಎಂದು ವಿಧವಿಧವಾಗಿ ಕಲ್ಪನೆಗಳನ್ನು ಮಾಡಿಕೊಳ್ಳುತ್ತಾರೆ. ಒಂದೊಂದು ಧರ್ಮದಲ್ಲಿ ಒಂದೊಂದು ಬಗೆಯ ಕಲ್ಪನೆಯಿದೆ. ಒಂದೇ ಧರ್ಮದ ಬೇರೆ ಬೇರೆ ಮತ ಪಂಗಡಗಳಲ್ಲಿ ಬೇರೆ ಬೇರೆ ಕಲ್ಪನೆಯಿದೆ'[೫೨] ಎಂದು ವಿವರಿಸುತ್ತ ಗ್ರೀಕರ, ಯಹೂದಿಗಳ, ಕ್ರೈಸ್ತರ, ಇಸ್ಲಾಮ, ಹಿಂದೂ, ಫಾರ್ಸಿ, ಶೀಖ ಮುಂತಾದ ಹಲವಾರು ಜನಾಂಗಗಳು ನಂಬಿರುವ ದೇವರ ಕಲ್ಪನೆ ಕುರಿತು ತಿಳಿಸುತ್ತಾರೆ. ಆಯಾ ಮತ ಧರ್ಮಗಳಲ್ಲಿ ವ್ಯಕ್ತವಾಗಿರುವ ಅಭಿಪ್ರಾಯದ ಬಗ್ಗೆ 'ನಾನಾ ಧರ್ಮಗಳ ಸಿದ್ಧಾಂತಗಳಲ್ಲಿಯೂ ಪರಸ್ಪರವಾಗಿ ಎಷ್ಟೆಷ್ಟೇ ವ್ಯತ್ಯಾಸಗಳಿದ್ದರೂ ಶಾಶ್ವತವಾದ

---

೫೧. ಕಲ್ಕಿ ಅಥವಾ ನಾಗರಿಕತೆಯ ಭವಿಷ್ಯ. ಪು. ೯೩

೫೨. ಅದೇ ಪು. ೯೪

ಮಹಾಚೇತನವೊಂದಿದೆ ಎಂಬ ವಿಚಾರದಲ್ಲಿ ಮಾತ್ರ ಭಿನ್ನಾಭಿಪ್ರಾಯವೇ ಇಲ್ಲ.'[೫೮] ಎಂಬುದನ್ನು ಹೇಳುತ್ತಾರೆ.

ದೇವರ ಕುರಿತು ರಾಧಾಕೃಷ್ಣನ್‌ರದು ಅಚಲವಾದ ನಂಬಿಕೆ. ದೇವರನ್ನು ಕುರಿತು ಅವರು ಹೇಳುವ ಮಾತುಗಳು ಹೀಗಿವೆ. 'ಭಗವಂತನು ಸರ್ವಾಧಾರ, ಸರ್ವಾತ್ಮ, ಆತನು ನಮ್ಮೆಲ್ಲರಲ್ಲಿಯೂ ಸೃಷ್ಟಿಯ ಸಮಸ್ತ ವಸ್ತುಗಳಲ್ಲಿಯೂ ಇರುವ ಸರ್ವಾಂತರ್ಯಾಮಿ. ಆತನು ವಿಶ್ವಾಧಾರವಾಗಿ ವಿಶ್ವವನ್ನೆಲ್ಲ ವ್ಯಾಪಿಸಿಯೂ ಇದ್ದಾನೆ ಮತ್ತು ವಿಶ್ವದಿಂದ ಆಚೆಗೂ ವ್ಯಾಪಿಸಿರುವ ಅನಂತನೂ ಆಗಿದ್ದಾನೆ.'[೫೯]

ಇಂತಹ ದೇವನನ್ನು ವ್ಯಾಖ್ಯೆಯ ಮೂಲಕ ಹೇಳಲು ಸಾಧ್ಯವಿಲ್ಲ. ತರ್ಕದ ಮೂಲಕ ತಿಳಿಸಲೂ ಸಾಧ್ಯವಿಲ್ಲವೆಂಬುದನ್ನೂ ಹೇಳುತ್ತಾರೆ. 'God can not be defined through logical symbols, but can be realised in the depths of the soul.'[೬೦]

ದೇವರನ್ನು ಆತ್ಮದ ಆಳದಲ್ಲಿ ಸಾಕ್ಷಾತ್ಕರಿಸಿಕೊಳ್ಳಬಹುದು. ಆದರೆ ಇಂದು ಜನ ದೇವರನ್ನು ಎಲ್ಲೆಲ್ಲಿ ಕಾಣಲು ಪ್ರಯತ್ನಿಸುತ್ತಿದ್ದಾರೆಂಬುದನ್ನೂ ಸಹ ಅವರು ವಿಶ್ಲೇಷಿಸುತ್ತಾರೆ. 'ಹಲವರ ದೇವರುಗಳು ನೀರಿನಲ್ಲಿ ಇರುತ್ತಾರೆ. ಹೆಚ್ಚಿನ ಪ್ರಗತಿ ಹೊಂದಿದವರ ದೇವರುಗಳು ಸ್ವರ್ಗದಲ್ಲಿರುತ್ತಾರೆ. ಬಾಲಿಶರಾದವರಿಗೆ ದೇವರು ಮರದ ಮತ್ತು ಕಲ್ಲಿನ ವಿಗ್ರಹಗಳಲ್ಲಿರುತ್ತಾನೆ. ಆದರೆ ಋಷಿಯಾದವನು ತನ್ನ ಅಂತರಾತ್ಮದಲ್ಲಿಯೇ ದೇವರನ್ನು ಕಾಣುತ್ತಾನೆ.'[೬೧] ಈ ರೀತಿ ದೇವರ ಆರಾಧಕರನ್ನು ಡಾ. ರಾಧಾಕೃಷ್ಣನ್‌ರು ವರ್ಗೀಕರಿಸುತ್ತಾರೆ. 'ನಿರಪೇಕ್ಷ ನಿರ್ಗುಣತ್ವ ಆರಾಧಕರು ಅತ್ಯುತ್ತಮ ದರ್ಜೆಯವರು. ಎರಡನೆಯವರು ಸಗುಣ ಬ್ರಹ್ಮವನ್ನು ಆರಾಧಿಸುವವರು, ಮತ್ತೆ ಬರುವವರು ರಾಮ, ಕೃಷ್ಣ, ಬುದ್ಧ ಮುಂತಾದ ಅವತಾರಗಳನ್ನು ಆರಾಧಿಸುವವರು. ಅದಕ್ಕಿಂತ ಕೆಳಗಿನವರು ಪಿತೃಗಳನ್ನು, ದೈವಗಳನ್ನು ಪೂಜಿಸುವವರು.'[೬೨]

ದೇವರನ್ನು ಪೂಜಿಸುವ ಈ ಜನರನ್ನೂ ಕೂಡ ಅವರು ವರ್ಗೀಕರಿಸುತ್ತಾರೆ. 'ಕಾರ್ಯಶೀಲನು ತನ್ನ ದೇವರನ್ನು ಅಗ್ನಿಯಲ್ಲೂ, ಭಾವನಾಪರನು ತನ್ನ

---

೫೮. ಕಲ್ಕಿ ಅಥವಾ ನಾಗರಿಕತೆಯ ಭವಿಷ್ಯ. ಪು. ೯೫, ೯೬

೫೯. ಅದೇ ಪು. ೯೩, ೯೪

೬೦. The Heart of Hindusthan, p 62

೬೧. ಹಿಂದೂ ಜೀವನ ದರ್ಶನ. ಪು. ೧೬

೬೨. ಅದೇ. ಪು. ೧೬

ಹೃದಯದಲ್ಲೂ, ಮಾನಸಿಕ ದುರ್ಬಲನು ವಿಗ್ರಹದಲ್ಲೂ ಕಾಣುತ್ತಾನೆ. ಆದರೆ ಆಧ್ಯಾತ್ಮದಲ್ಲಿ ಶಕ್ತಿವಂತನು ದೇವನನ್ನು ಎಲ್ಲೆಲ್ಲೂ ಕಾಣುತ್ತಾನೆ'ಮತ್ತು ದೃಷ್ಟಾರನು ಪರಮೇಶ್ವರನನ್ನು ಆತ್ಮದಲ್ಲಲ್ಲದೆ ಮೂರ್ತಿಗಳಲ್ಲಿ ನೋಡುವುದಿಲ್ಲ. ಅನೇಕ ಹಿಂದೂಗಳು ಈ ಕ್ರಮವನ್ನು ಕಡ್ಡಾಯವಾಗಿ ಪಾಲಿಸದೆ ಅತೃಪ್ತಿಕರವಾದ ದೇವತಾಭಾವನೆಗಳಲ್ಲೇ ಸಿಕ್ಕಿಕೊಂಡಿರುವುದು ವಿಷಾದಕರ, ದುರದೃಷ್ಟಕರ'[೬೩] ಎಂದು ವಿಷಾದ ವ್ಯಕ್ತಪಡಿಸಿದ್ದಾರೆ.

ಬ್ರಹ್ಮ-ವಿಷ್ಣು-ಶಿವ (ಮಹೇಶ್ವರ) ಎಂಬ ಕಲ್ಪನೆಗಳ ಕುರಿತೂ ಸಹ ಡಾ. ರಾಧಾಕೃಷ್ಣನ್‌ರು ತಮ್ಮ ನೇರ ವಿಚಾರಗಳನ್ನು ತಿಳಿಯಪಡಿಸಿದ್ದಾರೆ. 'ಬ್ರಹ್ಮ, ವಿಷ್ಣು, ಶಿವ ಎನ್ನುವ ಅರ್ಥಗಳಲ್ಲಿ ಹೇಳುತ್ತೇವೆ. ಇವು ಜ್ಞಾನದ ಮೂರು ಸ್ವತಂತ್ರ ಕೇಂದ್ರಗಳಲ್ಲ. ಆದರೆ ಒಂದೇ ಸಂಕೀರ್ಣ ವ್ಯಕ್ತಿತ್ವದ ಮೂರು ಪಾರ್ಶ್ವಗಳು.'[೬೪]

ಈ ಸತ್ಯವನ್ನರಿತುಕೊಳ್ಳದೇ ಮೂಢ ಭಾವುಕ ಜನರು ಬ್ರಹ್ಮ-ವಿಷ್ಣು-ಮಹೇಶ್ವರ ಎಂದು ಇರುವ ಒಂದೇ ಚೇತನ ಶಕ್ತಿಗೆ ನೂರಾರು ಹೆಸರಿಟ್ಟುಕೊಂಡು ಕಚ್ಚಾಡುತ್ತಿರುವುದು ಕಂಡುಬರುತ್ತಿದೆ.

'ನಮ್ಮ ಭಾವನೆಗಳು ಹೇಳಬಯಸುವ ಸತ್ಯದ ಮೂಲವನ್ನು ತಲುಪುವವರೆಗೂ ದೇವನ ಕಲ್ಪನೆಗಳನ್ನು ನಾವು ಸತತವಾಗಿ ಮಾರ್ಪಡಿಸುತ್ತಲೇ ಇರಬೇಕು'[೬೫] ಎಂಬುದನ್ನು ಕೂಡ ತಿಳಿಸುತ್ತಾರೆ.

ಆದರೆ ಇಂದಿನ ಅನೇಕ ಜನ ವಿಚಾರವಂತರು ಮತ್ತು ವಿದ್ಯೆ ಕಲಿತ ಯುವಕರು ದೇವರಿದ್ದಾನೆಯೆ? ಇದ್ದರೆ ಸಿದ್ಧ ಮಾಡಿ ತೋರಿಸಿರಿ? ಎಂಬ ಪ್ರಶ್ನೆಗಳನ್ನು ಹಾಕುವುದು ಕಂಡುಬರುತ್ತದೆ. ಈ ಕುರಿತು ಅನೇಕ ತತ್ತ್ವವೇತ್ತ ದೇವವಾದಿಗಳು ಹಲವಾರು ಉದಾಹರಣೆಗಳೊಂದಿಗೆ ಸಿದ್ಧಪಡಿಸಲು ಯತ್ನಿಸಿದ್ದಾರೆ. ಅವುಗಳಲ್ಲಿ ಪ್ರಮುಖವಾಗಿ ಪರಿಪೂರ್ಣವಾದ (ontological proof) ಆದಿ ಕಾರಣವಾದ (Cosmological proof); ಸದುದ್ದೇಶವಾದ (Teleogical proof); ತರ್ಕ ಪ್ರಮಾಣವಾದ (Logical Proof) ಇತ್ಯಾದಿ. ಈ ಎಲ್ಲ ಸಾಕ್ಷಿ-ಪುರಾವೆ-ವಾದಗಳನ್ನು ಕೂಲಂಕುಷವಾಗಿ ಪರಿಶೀಲಿಸಿ, ವಿಮರ್ಶಿಸಿ, ಡಾ. ರಾಧಾಕೃಷ್ಣನ್‌ರು ಹೇಳುತ್ತಾರೆ. 'All proofs for the existence of God fail because they conceive of God as an ojbective reality.

---

೬೩. ಅದೇ. ಪು. ೧೬, ೧೭

೬೪. ಅದೇ. ಪು. ೧೨

೬೫. ಅದೇ. ಪು. ೧೭

Spirit is life, not thing, energy not immobility. Something real in itself & by itself and can not be compared to any substance subjective or objective.

The Divine is manifested in spiitual life of experience.[೬೬] ಅಂದರೆ, ದೇವನ ಅಸ್ತಿತ್ವವನ್ನು ಸಿದ್ಧಪಡಿಸುವ ಎಲ್ಲ ವಾದಗಳೂ ಸೋಲುತ್ತವೆ. ಯಾಕೆಂದರೆ ದೇವನನ್ನು ಭೌತಿಕ ವಸ್ತುವೆಂದು ಅವು ಊಹಿಸಿವೆ. ದೇವರು (ಚೈತನ್ಯ) ಎಂಬುದು ಜೀವಚೇತನ ವಸ್ತುವಲ್ಲ. ಅದು ಶಕ್ತಿಯೇ ವಿನ ಅಚಲವಲ್ಲ, ಅದು ಸತ್ಯವಾಗಿದೆ. ಅದು ತನ್ನೊಳಗೆ ಮತ್ತು ತನ್ನಿಂದಲೇ ಸತ್ಯವೆನಿಸಿದೆ. ಅದನ್ನು ಯಾವುದೇ ವಸ್ತುವಿಗಾಗಲಿ ಕಾಲ್ಪನಿಕ ವಿಷಯದಿಂದಾಗಲಿ ತುಲನೆ ಮಾಡಲಾಗದು. ದೇವರೆಂಬುದು ಆಧ್ಯಾತ್ಮ ಜೀವನದಲ್ಲಿ ಅಥವಾ ಅನುಭವಗಳಲ್ಲಿ ಅವಿರ್ಭವಿಸುವ (ಪ್ರಕಟ)ತ್ತದೆ ಎಂದು ಡಾ. ರಾಧಾಕೃಷ್ಣನ್‌ರು ವಿವರಿಸುತ್ತಾರೆ.

---

೬೬. Contemporary Indian Philosophy : The spirit in man p. 962

# ೮. ಡಾ. ರಾಧಾಕೃಷ್ಣನ್‌ರ ಶೈಕ್ಷಣಿಕ ವಿಚಾರಗಳು

ಡಾ. ರಾಧಾಕೃಷ್ಣನ್ನರು ವಿಶ್ವವಿಖ್ಯಾತ ತತ್ವಜ್ಞಾನಿ, ಶಿಕ್ಷಣ ತಜ್ಞರಾಗಿ, ದೇಶ-ವಿದೇಶಗಳನ್ನೆಲ್ಲ ಸಂಚರಿಸಿ, ಪ್ರಪಂಚದ ಜನಾಂಗಗಳ ಸರಿಯಾದ ತಿಳುವಳಿಕೆ ಹೊಂದಿದವರು. ಯಾವುದೇ ಒಂದು ದೇಶ ಸರ್ವಾಂಗ ಪರಿಪೂರ್ಣವಾಗಬೇಕಾದರೆ ಆ ದೇಶದ ಜನ ಸುಶಿಕ್ಷಿತರೂ, ಸುಸಂಸ್ಕೃತರೂ, ಸತ್ಕ್ರಿಯಾವಂತರೂ ಆಗಿರಬೇಕಾಗಿರುತ್ತದೆ. ಕಾಡಿನ ಮಾನವ-ನಾಡಿನ ಮಾನವನಾಗಲು ಹತ್ತಾರು ಸಹಸ್ರ ವರುಷಗಳನ್ನು ಕ್ರಮಿಸಿ ಬಂದಿರುವುದು ತಿಳಿದು ಬರುತ್ತದೆ.

ಮಾನವ ಕುಲದಲ್ಲಿ ಏಕತೆ-ಶಾಂತಿ-ನೆಮ್ಮದಿ ಒಡಮೂಡಬೇಕಾದರೆ ಪ್ರತಿಯೊಂದು ದೇಶದಲ್ಲಿ ಸರಿಯಾದ, ಯೋಗ್ಯವಾದ ಶಿಕ್ಷಣ ನೀಡಲ್ಪಡಬೇಕು. ಅಂತಹ ಶಿಕ್ಷಣ ಕುರಿತು ಆಳವಾದ ಚಿಂತನ ಮಾಡಿ, ಶಿಕ್ಷಕ-ಶಿಕ್ಷಣತಜ್ಞ-ಶಿಕ್ಷಣ ತತ್ವಜ್ಞಾನಿಯಾಗಿ ಅವರು ವ್ಯಕ್ತಪಡಿಸಿರುವ ವಿಚಾರಗಳು ಇಡೀ ಮಾನವ ಕುಲಕ್ಕೆ ದಾರಿ ತೋರುವ ಬೆಳಕಿನ ರೇಖೆಗಳಾಗಿವೆ.

**ಶಿಕ್ಷಣ ಎಂದರೇನು? ಶಿಕ್ಷಣದ ಗುರಿ ಏನಾಗಿರಬೇಕು?** ಶಿಕ್ಷಣ ಯಾಕೆ ಬೇಕು? ಇತ್ಯಾದಿ ವಿಷಯಗಳ ಕುರಿತು ಆಳವಾಗಿ ಚಿಂತನ ಮಾಡಿದ್ದಾರೆ.

'Education is Second birth"[೬೭] ಶಿಕ್ಷಣವೆಂದರೆ ದ್ವಿತೀಯ ಜನ್ಮ, ಅಂದರೆ ಎರಡನೆಯ ಹುಟ್ಟು. ಮಾನವ ತಂದೆ-ತಾಯಿಯರ ಗರ್ಭದಿಂದ ಹುಟ್ಟುವುದು ಮೊದಲ ಜನ್ಮ (ಮಾಂಸಪಿಂಡ) ಎನಿಸಿದರೆ, ಅನಂತರದಲ್ಲಿ ಯೋಗ್ಯ ಗುರುವಿನ ಸಂಸ್ಕಾರ ಫಲವಾಗಿ ಮರುಹುಟ್ಟು ಪಡೆಯುವುದೇ ಎರಡನೇ ಜನ್ಮ ಎಂದೆನಿಸುತ್ತದೆ. ಅಕ್ಷರ ವಿದ್ಯೆ ಕಲಿಸುವ ಶಿಕ್ಷಕನಿಂದ ಹಿಡಿದು ಆತ್ಮವಿದ್ಯೆ ಕಲಿಸುವ ಧರ್ಮಗುರುವಿನನವರೆಗೂ ಎಲ್ಲರೂ ಗುರುಗಳೇ, ಪರಾವಿದ್ಯೆ-ಅಪರಾವಿದ್ಯೆ (ಲೌಕಿಕ-ಪಾರಮಾರ್ಥಿಕ)ಗಳೆಂದು ಉಪನಿಷತ್ಕಾಲದ ದಾರ್ಶನಿಕ ಋಷಿಗಳು ವಿವರಿಸುವ ಜ್ಞಾನದಿಂದ ಹಿಡಿದು ಇಂದಿನ ಆಧುನಿಕ ಶಿಕ್ಷಕರವರೆಗೆ ಈ ಕಾರ್ಯ ಮಾಡುತ್ತ ಬಂದಿರುವವರೆಲ್ಲರೂ ಗುರುಗಳು. ಇಂತಹ ಗುರುವಿನ ಸಂಸ್ಕಾರ (ಶಿಕ್ಷಣ)ದಿಂದಲೇ ಮಾನವ ಎರಡನೇ ಹುಟ್ಟು ಪಡೆಯುತ್ತಾನೆ. ಅದು ಭೌತಿಕ ಹುಟ್ಟು ಅಲ್ಲ. ಅದು ಜ್ಞಾನದ ಹುಟ್ಟು.

---

೬೭. The creative life, p. 26

ಸ್ವಾಮಿ ವಿವೇಕಾನಂದರ ಮಾತನ್ನು ಇಲ್ಲಿ ಗಮನಿಸಬಹುದು. 'Education is the manifestation of perfection already in man.'[೬೮] ಮಾನವನೊಳಗೆ ಈಗಾಗಲೇ ಇರುವ, ಸುಪ್ತವಾಗಿರುವ, ಅವ್ಯಕ್ತವಾಗಿರುವ ಪೂರ್ಣ ಜ್ಞಾನವನ್ನು ಹೊರಹೊಮ್ಮಿಸುವುದೇ ಶಿಕ್ಷಣವಾಗಿದೆ.

ಇಂತಹ ಶಿಕ್ಷಣವು ಹೇಗಿರಬೇಕು ಎಂಬ ಬಗ್ಗೆ ಡಾ. ರಾಧಾಕೃಷ್ಣನ್‌ರು ತಿಳಿಸುತ್ತಾರೆ. 'The kind of Education that is imparted must not only be broad but should also be deep.'[೬೯] ಶಿಕ್ಷಣವು ಕೇವಲ ವಿಶಾಲವಾಗಿದ್ದರೆ ಸಾಲದು, ಅದು ಆಳವಾಗಿರಬೇಕು. ಆಳವಾದ ಶಿಕ್ಷಣ ಅಂದರೆ ವಿಷಯದ ಸಮಗ್ರ ಜ್ಞಾನ ಲಭಿಸುವಂತಾಗಬೇಕು. ಅಂದರೆ ಮಾತ್ರ ಪರಿವರ್ತನೆ ಸಾಧ್ಯ. ಕಲಿಯುವಿಕೆ ಎಂದರೆ ಕೇವಲ ಅಕ್ಷರ ಜ್ಞಾನವಲ್ಲ, ಕಲಿಯುವವನ ಪರಿವರ್ತನೆಯು. ಇದನ್ನೇ ಜಾರ್ಜ ಲಿಯೋನಾರ್ಡ ಎಂಬ ಶಿಕ್ಷಣ ತಜ್ಞ ಹೀಗೆ ಹೇಳುತ್ತಾನೆ - 'To learn is to change. Education is a process that changes the learner.'[೭೦]

ಡಾ. ರಾಧಾಕೃಷ್ಣನ್‌ರು ಈ ಮಾತನ್ನು ಬಹು ಸುಂದರವಾಗಿ ತಿಳಿಯಪಡಿಸುತ್ತಾರೆ - 'Literacy is not education, Knowledge is not education; but the growth of wisdom, the capacity to look upon other objects with Compassion, that is what is necessary.'[೭೧] ಅಕ್ಷರ ಜ್ಞಾನವಷ್ಟೇ ಶಿಕ್ಷಣವಲ್ಲ, ಜ್ಞಾನ (ತಿಳವಳಿಕೆ)ವಷ್ಟೇ ಶಿಕ್ಷಣವಲ್ಲ; ಆದರೆ ಜಾಣ್ಮೆಯ ಬೆಳವಣಿಗೆ. ಇನ್ನಿತರ ವಸ್ತು ವಿಷಯಗಳನ್ನು ಕರುಣೆ, ಅನುಕಂಪ ಪೂರ್ಣವಾಗಿ ನೋಡುವುದನ್ನು ಕಲಿಯಬೇಕು. ಅದು ಅವಶ್ಯವಾದುದು ಎಂದು ತಿಳಿಸುತ್ತಾರೆ.

ಪ್ರತಿಯೊಬ್ಬ ಮಾನವನಲ್ಲಿ ತನು-ಮನ-ಭಾವಗಳಿವೆ. ತತ್ತ್ವಜ್ಞಾನಿ ರಾಧಾಕೃಷ್ಣನ್‌ರು 'Man is a composite being thinking, feeling and willing. More than these three things he has a spirit. He has a Soul'[೭೨] ಎಂದು ತಿಳಿಯಪಡಿಸಿದ್ದಾರೆ. ಮಾನವನಲ್ಲಿ ಇಚ್ಛಾಶಕ್ತಿ,-ಜ್ಞಾನಶಕ್ತಿ-

೬೮. Swami Vivekanand on India and Her Problems, p. 41

೬೯. The creative life, p. 15

೭೦. Education and Ecstasy, p. 18

೭೧. True knowledge, p. 17

೭೨. Ibid, p. 23

ಕ್ರಿಯಾಶಕ್ತಿಗಳಿವೆ. ಇದಲ್ಲದೇ ಚೈತನ್ಯವಿದೆ. ಆತ್ಮವಿದೆ. ಶಿಕ್ಷಣವು ಈ ಎಲ್ಲವುಗಳ ಅರಳುವಿಕೆಯಾಗಿದೆ. ಅವರು ಮುಂದುವರೆದು ಹೇಳುತ್ತಾರೆ -'Education is for the whole man to think, to feel, to do, to be'[೨೩] ಶಿಕ್ಷಣವೆಂದರೆ ಪೂರ್ಣ ಮಾನವ ವಿಕಾಸವಾಗಿದೆ. ವಿಚಾರ ಮಾಡುವಿಕೆ, ಭಾವಿಸುವಿಕೆ, ಕಾರ್ಯ ಮಾಡುವಿಕೆ ಇರುವಿಕೆಯನ್ನೊಳಗೊಂಡಿದೆ.

**ಆಧುನಿಕ ಯುಗವು ವೈಜ್ಞಾನಿಕ ಯುಗವಾಗಿದೆ.** ವೈಜ್ಞಾನಿಕ ಯುಗದಲ್ಲಿ ಮಾನವನ ಬದಕು ಯಾಂತ್ರಿಕವಾಗುತ್ತಿದೆ. ವಿಜ್ಞಾನದ ಬಹಳಷ್ಟು ಕೊಡುಗೆಗಳನ್ನು ಮಾನವ ದುರುಪಯೋಗ ಪಡಿಸಿಕೊಂಡು ವಿಕೃತ ಭೋಗಿಯಾಗುತ್ತಿದ್ದಾನೆ. ಇದರಿಂದ ತನ್ನ ಬಾಳುವೆಯನ್ನು ಹಾಳು ಮಾಡಿಕೊಳ್ಳುತ್ತಿದ್ದಾನೆ. ತನ್ನ ಗೋರಿಯನ್ನು ತಾನೇ ತೋಡಿಕೊಳ್ಳುತ್ತಿದ್ದಾನೆ. ಆದ್ದರಿಂದ ಭೌತಿಕ ಸೌಲಭ್ಯಗಳ ಶಿಕ್ಷಣದೊಂದಿಗೆ ಆತ್ಮ ಶಿಕ್ಷಣ ಅಂದರೆ Spiritual Education ಅವಶ್ಯವಾಗಿ ಒದಗಿಸಲೇಬೇಕಾಗಿದೆ.

**ಆದರೆ ಇಂದಿನ ನಮ್ಮ ಶಿಕ್ಷಣ ವ್ಯವಸ್ಥೆ ಏನಾಗಿದೆ ? ಏನಾಗುತ್ತಿದೆ?** ವಿಚಾರ ಮಾಡಬೇಕಾಗಿದೆ. ಸ್ವಾಮಿ ವಿವೇಕಾನಂದರು ತಿಳಿಸುವಂತೆ 'The present system is nothing but a perfect machine for turning out clerks'[೨೪] ಅಂದರೆ ಇಂದಿನ ನಮ್ಮ ಶಿಕ್ಷಣ ಪದ್ಧತಿಯು ಸಂಪೂರ್ಣ ಯಾಂತ್ರಿಕವಾಗಿದೆ. ಯಂತ್ರದ ಮೂಲಕ ಕಾರಕೂನರನ್ನು ನಿರ್ಮಿಸುವಲ್ಲಿ ಸಫಲವಾಗಿದೆ. ಇಂದಣ ಶಾಲೆ-ಕಾಲೇಜುಗಳು ಕಾರಕೂನರನ್ನು ನಿರ್ಮಿಸುವ ಕಾರಖಾನೆಗಳಾಗಿವೆ ಎಂದು ಹೇಳಿದರೇನೂ ತಪ್ಪಾಗಲಿಕ್ಕಿಲ್ಲ.

ಆದ್ದರಿಂದ ಡಾ. ರಾಧಾಕೃಷ್ಣನ್‌ರು ಇಂದಣ ನಮ್ಮ ಶಿಕ್ಷಣ ವ್ಯವಸ್ಥೆಯ ದೋಷಗಳನ್ನು ಸ್ಪಷ್ಟವಾಗಿ ಎತ್ತಿ ತೋರಿಸುತ್ತಾರೆ. 'Our Educational system breaks the human spirit, spoils the human creativeness, and spoils the deciding nature of pupil' ಎಂದು ಘಂಟಾಘೋಷವಾಗಿ ಸಾರಿ ಸಾರಿ ಎಚ್ಚರಿಸಿದ್ದಾರೆ. ಅಂದರೆ ಇಂದಿನ ನಮ್ಮ ಶಿಕ್ಷಣಪದ್ಧತಿಯು ಮಾನವ ಚೈತನ್ಯವನ್ನು ಮುರಿದುಹಾಕುತ್ತದೆ. ಮಾನವನ ಕ್ರಿಯಾತ್ಮಕ ಶಕ್ತಿಯನ್ನು ಹಾಳುಮಾಡುತ್ತದೆ ಮತ್ತು ವಿದ್ಯಾರ್ಥಿಯ ನಿರ್ಣಯಾತ್ಮಕ ಸ್ವಭಾವವನ್ನು ಕೆಡಿಸುತ್ತದೆ.

---

೨೩. Ibid, p. 21

೨೪. India and Her Problems, p. 39

ನಮ್ಮಲ್ಲಿಂದು ನಿಜವಾಗಿಯೂ ಬಳಕೆಯಲ್ಲಿರುವುದು ಬ್ರಿಟೀಶರ ಕಾಲದ ಶಿಕ್ಷಣ ಪದ್ಧತಿಯೇ. ಬ್ರಿಟೀಷರು ತಮ್ಮ ಆಡಳಿತ ವ್ಯವಸ್ಥೆಯ ಅನುಕೂಲತೆಗಾಗಿ ಭಾರತೀಯರಿಗೆ ಕಾರಕೂನ ಕೆಲಸದ ಸಲುವಾಗಿ ಯಾವ ಶಿಕ್ಷಣಪದ್ಧತಿ ರೂಪಿಸಿದ್ದರೋ ಅದನ್ನೇ ಸ್ವಾತಂತ್ರ್ಯ ನಂತರ ನಮ್ಮ ರಾಜಕೀಯ ಪ್ರಭುಗಳು ಮುಂದುವರಿಸಿಕೊಂಡು ಬಂದರು. ಶಿಕ್ಷಣದ ಸಮಗ್ರ ಬದಲಾವಣೆಗಾಗಿ ೧೯೪೮ ರಲ್ಲಿ **ರಾಧಾಕೃಷ್ಣನ್** ಆಯೋಗ, ೧೯೫೨ ರಲ್ಲಿ **ಮೊದಲಿಯಾರ್** ಆಯೋಗ, ೧೯೬೪ ರಲ್ಲಿ **ಕೋಠಾರಿ** ಆಯೋಗ ನೇಮಿಸಿದರು. ಈ ಶಿಕ್ಷಣ ತಜ್ಞರು ಪರಿಶ್ರಮವಹಿಸಿ ಒಪ್ಪಿಸಿದ ಒಂದು ವರದಿಯನ್ನೂ ಸಮಗ್ರವಾಗಿ ಪರಿಶೀಲಿಸಿ ಮಥನ ಮಾಡಿ ಜಾರಿಗೆ ತರದಿರುವುದು ಇಂದಿನ ನಮ್ಮ ದೇಶದ ಸ್ಥಿತಿ-ಗತಿಗೆ ಕಾರಣವಾಗಿದೆಯೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

ನಮ್ಮ ದೇಶದಲ್ಲಿ ಬಹುತರವಾಗಿ ಅಲಕ್ಷಿಸಲ್ಪಟ್ಟ ಎರಡು ಅಂಗಗಳೆಂದರೆ ಕೃಷಿ ಮತ್ತು ಶಿಕ್ಷಣ. ಒಂದು ದೇಶದ ಬೆನ್ನೆಲುಬು ಇನ್ನೊಂದು ದೇಶದ ಆತ್ಮಶಕ್ತಿ. ಇವೆರಡೂ ಅದೇನು ಕಾರಣವೋ ಏನೋ ಅಲಕ್ಷಕ್ಕೊಳಗಾಳುತ್ತಲೆ ಬಂದವು. ಸ್ವಾತಂತ್ರ್ಯ ಸಿಕ್ಕು ಅರವತ್ತೆಂಟು ವರ್ಷವಾಗ್ತಾ ಬಂದರೂ ರೈತನ ಸಮಸ್ಯೆಗಳು ಪರಿಹಾರವಾಗಿಲ್ಲ. ಆತನ ಬಾಳಿಗೆ ನೆಮ್ಮದಿ, ಸುಖ ಇಲ್ಲ. ಕಡುಬಡತನದಲ್ಲಿಯೆ ಎಲುವಿನ ಹಂದರವಾಗಿ ಮಣ್ಣಿನ ಮಗನಾಗಿ ಮಣ್ಣಿನಲ್ಲಿ ಒಂದಾಗುತ್ತಿದ್ದಾನೆ.

ಇನ್ನೊಂದೆಡೆ ನಮ್ಮ ಶಿಕ್ಷಣ. ಇದು ಭೌತಿಕವಾಗಿ ಅನುತ್ಪಾದಕ (Non-Productive)ವೆಂಬ ಭಾವದಿಂದಲೋ ಏನೋ ತೀವ್ರವಾಗಿ ಗಮನಹರಿಸಲಿಲ್ಲವೆಂದು ಕಾಣುತ್ತದೆ. ಇಂದು ನಮ್ಮ ದೇಶದಲ್ಲಿ ಅಂದಾಜು ೧೦ ಲಕ್ಷ ಶಾಲೆ-ಕಾಲೇಜು (ಶಿಕ್ಷಣ ಸಂಸ್ಥೆಗಳು), ೪೦ ಲಕ್ಷ ಶಿಕ್ಷಕರು, ೨೦ ಕೋಟಿ ವಿದ್ಯಾರ್ಥಿಗಳು, ಇವರಿಗಾಗಿ ಆರು ಸಾವಿರ ಕೋಟಿ ರೂ. ಗಳ ವೆಚ್ಚವಾಗುತ್ತಿದೆಯೆಂದು ಹೇಳಲಾಗುತ್ತಿದೆ. ಆದಾಗ್ಯೂ ದೇಶದ ಸ್ಥಿತಿಗತಿ, ಜನತೆಯ ಭವಿಷ್ಯ ಸುಧಾರಿಸಿಲ್ಲ ಯಾಕೆ? ಈ ಬಗ್ಗೆ ಅಂತಃಕರಣ ಪೂರ್ವಕಾವಾಗಿ ಪ್ರಾಮಾಣಿಕ ಕಳಕಳಿಯ ಚಿಂತನ ನಡೆಯಬೇಕೆಂದೆನಿಸುವದಿಲ್ಲವೇ?

ಡಾ. ರಾಧಾಕೃಷ್ಣನ್‌ರು ಈ ಬಗ್ಗೆ ತಮ್ಮ ಚಿಂತನ ತಿಳಿಯಪಡಿಸುತ್ತಾರೆ. 'Any satisfactory system of education should aim at a balanced growth of the individual and insist on both knowledge and wisdom it should only train the intellect but bring grace in to the heart of man.'[೨೫]

---

೨೫. Speeches and Writings Vol. 1, p. 102

ಜ್ಞಾನವು ಜಾಣ್ಮೆಯೊಡಗೂಡಿ (ಜ್ಞಾನಂ ವಿಜ್ಞಾನ ಸಹಿತಂ) ಕಲಿಸಲ್ಪಡಬೇಕು ಮತ್ತು ಅದು ಬುದ್ಧಿ - ಹೃದಯಗಳೆರಡರಲ್ಲಿಯೂ ಕರುಣೆಯುಕ್ಕುವಂತೆ ಮಾಡಬೇಕು. ಕೇವಲ ಅಕ್ಷರಾಭ್ಯಾಸ ಮಾಡಿ ಉನ್ನತ ಮಟ್ಟಕ್ಕೇರಿ ದೇಶದ ಎಲ್ಲ ರಂಗಗಳಲ್ಲಿ ಭ್ರಷ್ಟತೆ-ಲಂಚಗುಳಿತನದ ಭೀಷಣತೆಗೆ ಕಾರಣೀಭೂತರಾಗಿರುವ ಬಹಳಷ್ಟು ಜನ ಸಾಕ್ಷರರು ಇಂದು ರಾಕ್ಷಸರಾಗುತ್ತಿರುವುದು ಅಷ್ಟೇ ಕಟು ಸತ್ಯವಾಗಿದೆ. **ಸಾಕ್ಷರಾ ವಿಪರೀತವಾಗಿ ರಾಕ್ಷಸಾ** ಆಗಿರಬಹುದೆನಿಸುತ್ತಿದೆ.

ಇಂದು ಸ್ವಾರ್ಥ-ದುಷ್ಟ ಬುದ್ಧಿಯ ಬಂಡವಾಳಶಾಹಿ ಮಾನವರಿಂದಾಗಿ ದೇಶದಲ್ಲೆಲ್ಲ ಕೊಳಚೆ ಪ್ರದೇಶಗಳು ಭೌತಿಕವಾಗಿ ನಿರ್ಮಾಣವಾಗಿವೆ. ಮಾನವನ ಬಾಳುವೆ ಪಶು ಬಾಳುವೆಗಿಂತ ನರಕ ಸದೃಶವಾಗಿದೆ. ಇದಕ್ಕಿಂತ ಭೀಕರ ಮಾನಸಿಕ ಕೊಳಚೆ ಪ್ರದೇಶಗಳು ಎನ್ನುತ್ತಾರೆ ಡಾ. ರಾಧಾಕೃಷ್ಣನ್‌ರು 'Mental slums are more dangerous to mankind than material slums.'[೭೬] ಇಂತಹ ವಿಷಮ-ವಿಷ ವೃತ್ತದಿಂದ ಮೇಲೇಳುವ ಬಗೆ ಹೇಗೆ? ಇದಕ್ಕೆ ಬಹು ಕಠಿಣವಾದ ನೋವು ಮತ್ತು ತ್ಯಾಗ ಬೇಕು ಎನ್ನುತ್ತಾರೆ ಡಾ. ರಾಧಾಕೃಷ್ಣನ್‌ರು 'Nothing great is achieved without Pain and Sacrifice.'[೭೭]

## ಶಿಕ್ಷಕರ ಪಾತ್ರ

ನಮ್ಮ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕು ೬೮ ವರ್ಷಗಳಾಗುತ್ತ ಬಂದರೂ ಇನ್ನೂ ನೂರಕ್ಕೆ ೫೦ ರಷ್ಟು ಅವಿದ್ಯಾವಂತರಿದ್ದಾರೆಂದು ಅಂದಾಜು ಮಾಡಲಾಗಿದೆ. ೧೨೮ ಕೋಟಿಯಲ್ಲಿ ಇನ್ನೂ ೫೫ ಕೋಟಿ ಜನ ಅನಕ್ಷರಸ್ಥರು, ಅವಿದ್ಯಾವಂತರು. ಇದು ಪ್ರತಿಯೊಬ್ಬ ಪ್ರಜ್ಞಾವಂತ ನಾಗರಿಕ ತಲೆ ತಗ್ಗಿಸಬೇಕಾದ ಸಂಗತಿಯಾಗಿದೆ. ೧೯೫೦ ರಲ್ಲಿಯೇ ನಮ್ಮ ಸಂವಿಧಾನದ ೪೫ನೇ ಕಲಮಿನಲ್ಲಿ ಈ ದೇಶದ ೬ ರಿಂದ ೧೪ ವರ್ಷಗಳ ಎಲ್ಲ ಮಕ್ಕಳಿಗೂ ಕಡ್ಡಾಯದ ಉಚಿತ ಪ್ರಾಥಮಿಕ ಶಿಕ್ಷಣ ಒದಗಿಸಲೇಬೇಕು ಎಂದು ಸೂಚಿಸಲ್ಪಟಿದ್ದರೂ ಕೂಡ ಇನ್ನೂ ನೂರಕ್ಕೆ ೪೦ ರಷ್ಟು ಮಕ್ಕಳು ತಮ್ಮ ತಂದೆ- ತಾಯಿಗಳ ವೃತ್ತಿ- ಕಸಬುಗಳಲ್ಲಿ, ಕಾರ್ಖಾನೆ-ಹೊಟೇಲುಗಳಲ್ಲಿ ದುಡಿಯುತ್ತಿವೆಯಂತೆ! ಬಡತನ-ಹಸಿವೆ-ಜೀವನದ ಅಭದ್ರತೆಗಳೇ ಇದಕ್ಕೆ ಕಾರಣ. ಇದು ನಿವಾರಣೆಯಾಗದೇ ನೂರಕ್ಕೆ ನೂರು ಶಿಕ್ಷಣದ ಗುರಿ ಸಾಧಿಸುವುದೆಂತು ಸಾಧ್ಯವಾದೀತು!

---

೭೬. True knowledge, p. 13

೭೭. Ibid, p. 15

ಈಗಿರುವ ಇಂತಹ ದಯನೀಯ ಸ್ಥಿತಿಯಲ್ಲಿಯೇ ಶಿಕ್ಷಕರ ಮೇಲೆ ಬಹು ದೊಡ್ಡ ಜವಾಬ್ದಾರಿ ಇದೆ ಎಂಬುದನ್ನು ಅರಿಯಬೇಕಾಗಿದೆ. ಶಿಕ್ಷಕ ವೃತ್ತಿ ತುಂಬಾ ಪವಿತ್ರವಾದುದು. ನಮ್ಮ ದೇಶದ ಪ್ರಾಚೀನ ಸಂಸ್ಕೃತಿಯಲ್ಲಿ ಶಿಕ್ಷಕರನ್ನು 'ಆಚಾರ್ಯ', 'ಗುರು' ಅಷ್ಟೇ ಏಕೆ 'ದೇವ'ರೆಂದೇ ಗೌರವಿಸಲಾಗಿದೆ. ಆಚಾರ್ಯ ದೇವೋಭವ; ಗುರುಬ್ರಹ್ಮ ಗುರುವಿಷ್ಣು ಗುರುದೇವೋ ಮಹೇಶ್ವರಃ ಗುರು ಸಾಕ್ಷಾತ್ ಪರಬ್ರಹ್ಮ;ನ ಗುರೋರಧಿಕಂ ಎಂದೂ ಸ್ತುತಿಸಲಾಗಿದೆ. ಹನ್ನೆರಡನೆಯ ಶತಮಾನದ ಬಸವಾದಿ ಶರಣರಂತೂ ಶಿವಪಥವನರಿವೊಡೆ ಗುರುಪಥವೇ ಮೊದಲೆಂದೂ ತಿಳಿಸಿದ್ದಾರೆ. ಕನ್ನಡ ನಾಡಿನ ಪ್ರಪ್ರಥಮ ಅಧ್ಯಾತ್ಮ ಕೋಗಿಲೆಯೆಂದೆನಿಸಿದ ಅಕ್ಕ ಮಹಾದೇವಿಯು -

ನರಜನ್ಮವ ತೊಡೆದು ಹರಜನ್ಮವ ಮಾಡಿದ ಗುರುವೇ
ಭವ ಬಂಧನ ಬಿಡಿಸಿ ಪರಮಸುಖವ ತೋರಿದ ಗುರುವೇ
ಭವಿಯೆಂಬುದ ತೊಡೆದು ಭಕ್ತೆಯೆಂದೆನಿಸಿದ ಗುರುವೇ
ಚೆನ್ನಮಲ್ಲಿಕಾರ್ಜುನನ ತಂದೆನ್ನ ಕೈವಶಕ್ಕೆ ಕೊಟ್ಟ ಗುರುವೇ
ಶರಣು ಶರಣಾರ್ಥಿ

ಎಂದು ಸ್ತುತಿ ಮಾಡಿರುವುದನ್ನು ಕಾಣುತ್ತೇವೆ.

ಮಾನವ ಶಿಶುಗಳ ಬಾಳನ್ನು ರೂಪಿಸುವಲ್ಲಿ, ದೇಶದ ನಾಳಿನ ನಾಗರಿಕರನ್ನು ನಿರ್ಮಿಸುವಲ್ಲಿ ಶಿಕ್ಷಕರ ಹೊಣೆಗಾರಿಕೆ ಬಹು ಹಿರಿಯದಾಗಿದೆ. ಇಂದಿನ ಶಿಕ್ಷಕರೆಂದರೆ ನಮ್ಮ ದೇಶದ ಪ್ರತಿಶತ ೫೦ರಷ್ಟಿರುವ ವಿದ್ಯಾವಂತ ಅಕ್ಷರಸ್ಥರಲ್ಲಿಯೇ ಪ್ರಜ್ಞೆಯುಳ್ಳವರು. 'Teachers are the cream of our society i.e., nation ಎಂಬ ಮಾತು ಸತ್ಯವೇ ಆಗಿದೆ.

ಡಾ. ರಾಧಾಕೃಷ್ಣನ್‌ರು ಹೇಳುತ್ತಾರೆ - 'The teachers place in society is of vital importance. Throughout the history of civilization it is the teachers who were able to transmit the intellectual traditions and the technical skills from one generation to another and to keep the lamp of civilization burning. It is their supreme function.[೭೮] ನಮ್ಮ ಸಮಾಜದಲ್ಲಿ ಶಿಕ್ಷಕರ ಸ್ಥಾನವು ಬಹಳ ಮಹತ್ವದ್ದಾಗಿದೆ. ನಾಗರಿಕತೆಯ ಇತಿಹಾಸದಲ್ಲಿ ಪ್ರಾಚೀನ ಜ್ಞಾನ ಪರಂಪರೆಯನ್ನು

೭೮. True knowledge, p. 41

ಜನಾಂಗಗಳಿಗೆ ನೀಡುತ್ತ ಮುಂದುವರೆಸಿಕೊಂಡು ಬಂದಿದ್ದಾರೆ. ನಾಗರಿಕತೆಯ ಜ್ಯೋತಿ ಉರಿಯುವಂತೆ ಪ್ರಜ್ವಲಿಸುವಂತೆ ಮಾಡಿದ್ದಾರೆ.

ಇಂತಹ ಭವ್ಯ ಪರಂಪರೆಯ ಪವಿತ್ರ ಕಾರ್ಯ ನಿರ್ವಹಿಸುವ ಹೊಣೆಗಾರಿಕೆ ಹೊತ್ತಿರುವ ಶಿಕ್ಷಕರ ಕಾರ್ಯ ಮಹತ್ವದ್ದಾಗಿದೆಯೆಂದು ಡಾ. ರಾಧಾಕೃಷ್ಣನ್‌ರು ತಿಳಿಸುತ್ತ 'Teachers have a great deal to do with the shaping of the minds and hearts of our youth'[೨೮] ನಮ್ಮ ಯುವ ಜನಾಂಗದ ಮನಸ್ಸು-ಹೃದಯಗಳನ್ನು ರೂಪಿಸುವ ಜವಾಬ್ದಾರಿ ಇದೆ.

ಶಿಶುವಿಹಾರ, ಪ್ರಾಥಮಿಕ, ಮಾಧ್ಯಮಿಕ, ಪದವಿಪೂರ್ವ, ಪದವಿ, ಉನ್ನತ-ಸ್ನಾತಕೊತ್ತರ, ವೃತ್ತಿನಿರತ, ವೈದ್ಯಕೀಯ, ಇಂಜನೀಯರಿಂಗ್, ಟೆಕ್ನಿಕಲ್ ಇನ್ನೂ ಮುಂತಾದ ಹಲವಾರು ಪ್ರಕಾರಗಳಲ್ಲಿ ಮಕ್ಕಳಿಗೆ ಜ್ಞಾನಾರ್ಜನೆ ನೀಡುತ್ತಿರುವ ಎಲ್ಲರೂ ಒಂದೇ ಹೊಣೆಗಾರಿಕೆಯುಳ್ಳ ಶಿಕ್ಷಕರೆಂಬುದನ್ನು ಅರಿತುಕೊಳ್ಳಬೇಕು. ಜವಾಬ್ದಾರಿಯನ್ನು ಒಬ್ಬರು ಇನ್ನೊಬ್ಬರ ಮೇಲೆ ಜಾರಿಸುತ್ತ ತಪ್ಪಿಸಿಕೊಳ್ಳುವುದು ಸರ್ವಥಾ ಸಲ್ಲದು. ಶಿಕ್ಷಕ ವೃತ್ತಿಯು ಪ್ರವೃತ್ತಿಯಾಗಬೇಕು. ಜೀವನ ಉಸಿರಾಗಬೇಕು. ಸತ್ಯ-ಶುದ್ಧ-ಪ್ರಾಮಾಣಿಕ ಕಳಕಳಿಯುಳ್ಳದ್ದಾಗಬೇಕು. ಆ ಹೆಸರಿನಲ್ಲಿರುವ ಅಕ್ಷರಗಳ ಸತ್ವ ಮತ್ತು ಮಹತ್ವವನ್ನು ಗಮನಿಸೋಣ.

**ಶಿಕ್ಷಕ** ಎಂದರೆ ಶೀಲ, ಕ್ಷಮೆ, ಕರ್ತವ್ಯನಿಷ್ಠೆ;
**ಅಧ್ಯಾಪಕ** ಎಂದರೆ ಅರಿವು, ಧ್ಯಾನ, ಪರಿಣತಿ, ಕರ್ತವ್ಯನಿಷ್ಠೆ;
**ಪ್ರಾಧ್ಯಾಪಕ** ಎಂದರೆ ಪ್ರಾಮಾಣಿಕತೆ, ಧ್ಯಾನ, ಪರಿಣತಿ, ಕರ್ತವ್ಯನಿಷ್ಠೆ;
**ಮುಖ್ಯಾಧ್ಯಾಪಕ** ಎಂದರೆ ಮುಂಜಾಗ್ರತೆ, ಖ್ಯಾತಿ, ಧ್ಯಾನ, ಪರಿಣತಿ, ಕರ್ತವ್ಯನಿಷ್ಠೆ;
**ಪ್ರಾಚಾರ್ಯ** ಎಂದರೆ ಪ್ರಾಮಾಣಿಕತೆ, ಚಾರಿತ್ರ್ಯ, ಯಜಮಾನಿಕೆ ಹಿರಿಯತನ
**ಪ್ರಾಂಶುಪಾಲ** ಎಂದರೆ ಪ್ರಾಮಾಣಿಕತೆ, ಶುಚಿತ್ವ, ಪಾವಿತ್ರ್ಯ, ಲವಲವಿಕೆ.

ಒಟ್ಟಿನಲ್ಲಿ ಸದ್ಗುಣಿ-ಸದಾಚಾರಿ-ಸದುವಿನಯ ಸಂಪನ್ನ, ಕರ್ತವ್ಯನಿಷ್ಠ. ಅರಿವು ಸಂಪನ್ನ, ಕ್ಷಮಾಶೀಲ, ಲವಲವಿಕೆಯುಳ್ಳ ನಿಸ್ವಾರ್ಥ ಕಾಯಕ ಜೀವಿಯೇ ಶಿಕ್ಷಕ ಎಂದೆನ್ನಬಹುದು.

ಇಂತಹ ಶಿಕ್ಷಕನಿಗೆ ಬೃಹದಾಕಾರದ ಕಟ್ಟಡಗಳಾಗಲೀ, ಉಪಕರಣ ಸೌಲಭ್ಯವುಳ್ಳ ಶಿಕ್ಷಣ ಸಂಸ್ಥೆಗಳಾಗಲಿ ಬದಲಿ ಪ್ರತಿನಿಧಿ (Substitute)ಗಳಾಗಲಾರವು ಎನ್ನುತ್ತಾರೆ. ಡಾ ರಾಧಾಕೃಷ್ಣನ್‌ರು 'Magnificent

---

೨೮. Speeches and Writings Vol. II, p. 202

buildings and equipments are not substitutes for the great teacher.'[೮೦]

ಇಂತಹ ಪವಿತ್ರ ಧ್ಯೇಯವುಳ್ಳ ಶಿಕ್ಷಕ ವೃತ್ತಿ ಇಂದು ನಮ್ಮ ದೇಶದಲ್ಲಿ ಸ್ವಾರ್ಥ ಮುಖಂಡರ, ಶಿಕ್ಷಣ ಸಂಸ್ಥೆಗಳ ಯಜಮಾನರುಗಳ ಧನದಾಹದಿಂದಾಗಿ ಹದಗೆಡುತ್ತಿದೆ. ಡೊನೇಶನ್ - ಲಂಚ ಮುಂತಾದವುಗಳ ಹೆಸರಿನಲ್ಲಿ ದುಡ್ಡಿದ್ದವರೆಲ್ಲ ವಶೀಲಿಯಿದ್ದವರೆಲ್ಲ ಬಹುತೇಕ ಈ ವೃತ್ತಿಗೆ ಬರುತ್ತಿರುವುದು, ಅನೇಕ ಸಲ ಆಸಕ್ತಿ ಇಲ್ಲದೇ 'ಮಜಾ' ಜೀವನ- ಕಾಲಯಾಪನೆಗಾಗಿ ಬರುವುದು ಹೆಚ್ಚಾಗುತ್ತಿರುವುದರಿಂದ ಶಿಕ್ಷಕ-ವಿದ್ಯಾರ್ಥಿ ಸಂಬಂಧಗಳು ಕೆಡುತ್ತಿವೆ.

ಆಧುನಿಕ ಸಮಾಜ ಜೀವನದ ವಿಷಮ ಗಾಳಿಯ ಸುಳಿಗೆ ಸಿಲಕಿದ ಕೆಲವು ಜನ ಶಿಕ್ಷಕರು ತಮ್ಮ ಕಾಯಕದ ಪಾವಿತ್ರ್ಯತೆ ಮರೆತು ದುಶ್ಚಟ-ದುರ್ವ್ಯಸನ-ದುರಾಚಾರಕ್ಕೆ ಬಲಿಯಾಗುತ್ತಿರುವುದು ಶೋಚನೀಯ ಹಾಗೂ ನಮ್ಮ ಭವಿಷತ್ ಭಾರತದ ದುರಂತವೂ ಆಗಿದೆ.

ಇಂದು ವ್ಯಾಪಕವಾಗಿ ವಿದ್ಯಾರ್ಥಿ ಸಮುದಾಯದಲ್ಲಿ ಹಬ್ಬಿರುವ ಬೀಡಿ-ಸಿಗರೇಟು-ತಂಬಾಕು-ಗಾಂಜಾ-ಗುಟಕಾ ಸೇವನೆ; ಬೀರು-ಬ್ರ್ಯಾಂಡಿ ಸೇಂದಿ-ಸರಾಯಿ ಕುಡಿಯುವಿಕೆ, ಹೆರಾಯಿನ್, ಎಲ್ಎಸ್ಡಿ, ಹಷಿಸ್‌ಮುಂತಾದ ಮಾದಕ ಪದಾರ್ಥಗಳ ಬಳಕೆಗಳಿಗೆ ಆಧುನಿಕ ಪರಿಸರ ಹಾಗೂ ಅದಕ್ಕೆ ಕಾರಣೀಭೂತವಾಗಿರುವ ದುಶ್ಚಟಗಳ ಹಿರಿಯರು ಎಂದರೆ ತಪ್ಪಾಗಲಿಕ್ಕಿಲ್ಲ.

ವಿದ್ಯಾರ್ಥಿಗಳು (ಮಕ್ಕಳು) ಕೆಡುತ್ತಿರುವುದಕ್ಕೆ ಕಾರಣ ಪಾಲಕರು, ಶಿಕ್ಷಕರು, ಸಮಾಜ ಮುಖಂಡರು, ರಾಜಕೀಯ ನಾಯಕರು, ಧರ್ಮಗುರುಗಳು ಹಾಗೂ ಪಾಶ್ಚಿಮಾತ್ಯ ನಾಗರಿಕ ಸಂಸ್ಕೃತಿಯ ಬಿರುಗಾಳಿಯ ಹೊಡೆತಗಳೆನ್ನಬಹುದು. ಇಡೀ ಸಮಾಜ ವ್ಯವಸ್ಥೆಯು ಅಧಃ ಪತನಕ್ಕಿಳಿಯುವ ಕೆಟ್ಟ ಲಕ್ಷಣಗಳು ಮೂಡಿ ಬಂದಿರುವಾಗ ವಿದ್ಯಾರ್ಥಿಗಳು ಹೇಗಾಗಿದ್ದಾರೆ. ಎಂಬುದನ್ನು ಡಾ. ರಾಧಾಕೃಷ್ಣನ್‌ರು ಚಿತ್ರಿಸುತ್ತಾರೆ. 'We see all around us signs of a self - centredness, cynicism and indescipline. We read frequently in the news papers about students resorting to rowdyism and violence'[೮೧] ಅಂದರೆ ನಾವು ನಮ್ಮ ಸುತ್ತಮುತ್ತಣ ಸ್ವಾರ್ಥಿಗಳಾದ, ಮುಂಗೋಪಿ ಸಿಡುಕು ಸ್ವಭಾವದ, ಅಶಿಸ್ತನ್ನು ಕಾಣುತ್ತೇವೆ. ವಿದ್ಯಾರ್ಥಿಗಳ ರೌಡಿತನ

---

೮೦. Ibid, p. 33
೮೧. Ibid, p. 33

ಮತ್ತು ಹಿಂಸೆಯನ್ನು ಪ್ರತಿದಿನ ಪ್ರತಿಕೆಗಳಲ್ಲಿ ಓದುತ್ತೇವೆ. ಕೆಲವು ಸಲವಂತೂ ಅಲ್ಲಲ್ಲಿ ವಿದ್ಯಾರ್ಥಿಗಳು ತಮ್ಮ ಶಿಕ್ಷಕರು, ಪ್ರಾಚಾರ್ಯರ ಮೇಲೆ ಹಲ್ಲೆ ಮಾಡಿರುವ ಪ್ರಸಂಗಗಳೂ ಜರುಗಿರವುದು ಕಂಡು ಬಂದಿದೆ.

ಬಾಲ್ಯಾವಸ್ಥೆಯಿಂದಲೇ ಮನೆಯಿಂದಲೇ ಒಳ್ಳೆಯ ನೈತಿಕ ಆಚಾರ-ವಿಚಾರಗಳ ಸುಸಂಸ್ಕೃತಿಯನ್ನು ಮಕ್ಕಳಲ್ಲಿ ಒಡಮೂಡಿಸಬೇಕು. ಅನಂತರ ಎರಡನೆಯ ಪಂತ ಶಿಕ್ಷಕರು-ಶಿಕ್ಷಣ ಸಂಸ್ಥೆಗಳು, ಎಲ್ಲಕ್ಕಿಂತ ಶಿಕ್ಷಕರ ಆಚಾರ-ವಿಚಾರ, ಸ್ವಭಾವ-ಸನ್ನಡತೆಗಳು ವಿದ್ಯಾರ್ಥಿಗಳ ಬಾಳನ್ನು ರೂಪಿಸುವಲ್ಲಿ ಮಹತ್ವದ ಪಾತ್ರ ವಹಿಸುತ್ತವೆ.

ಶಿಕ್ಷಕ ವೃತ್ತಿಯ ಮಹತ್ವವನ್ನರಿಯದ ಕೈ ಬೆರಳೆಣಿಕೆಯಷ್ಟು ಶಿಕ್ಷಕರು ಪ್ರತಿಯೊಂದು ಶಾಲೆ-ಕಾಲೇಜುಗಳಲ್ಲಿ ತಂಬಾಕು ಸೇವನೆ-ಮದ್ಯಪಾನ-ಜೂಜು-ಇಸ್ಪೇಟ ವ್ಯಭಿಚಾರ ಮುಂತಾದ ಹಲವಾರು ದಶ್ಚಟ-ದುರ್ಗುಣಗಳಿಗೆ ತೊಡಗಿ, ಇಡೀ ಶಿಕ್ಷಕ ಸಮುದಾಯಕ್ಕೆ ಕೆಟ್ಟ ಹೆಸರು ತಂದು ಈ ವೃತ್ತಿಯ ಪಾವಿತ್ರ್ಯತೆಗೆ ಕಲಂಕವುಂಟು ಮಾಡುತ್ತಿರುವುದನ್ನು ಸಮಾಜ ನೋಡುತ್ತಿದೆ.

'ಸಿಗರೇಟ್ ಸೇವನೆ ಆರೋಗ್ಯಕ್ಕೆ ಹಾನಿಕರ' ಎಂದು ಶಾಸನ ವಿಧಿಸಿದ ಎಚ್ಚರಿಕೆ ಇದ್ದರೂ ಸಹ, ಅಕ್ಷರ ಬಲ್ಲವರೇ ಈ ಚಟಕ್ಕೆ ಲಕ್ಷಾವಧಿ ಜನ ಬಲಿಯಾಗಿರುವಾಗ ಅನಕ್ಷರಸ್ಥರ ಪಾಡೇನಾದೀತು? ಪ್ರತಿವರ್ಷ ತಂಬಾಕ ಸೇವನೆಯೊಂದರಿಂದಲೇ ೯ ಲಕ್ಷ ೫೦ ಸಾವಿರ ಮೇಲ್ಪಟ್ಟು ಜನ ಸಾಯುತ್ತಾರಂತೆ. ಕುಡಿತದ ಚಟಕ್ಕೆ ಸಾಯುವವರ ಲೆಕ್ಕವಂತೂ ಖಚಿತವಾಗಿ ಸಿಗುತ್ತಿಲ್ಲ. ಹಾದಿ ಹೆಣ-ಬೀದಿ ಹೆಣವಾಗಿ ಹೋಗುತ್ತಿದ್ದಾರೆ. **ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರು 'ಕುಡಿತ'** ಕುರಿತು ತುಂಬ ನೋವಿನಿಂದ ಹೇಳುತ್ತಾರೆ. 'ಭಾರತವು ದಿವಾಳಿತನಕ್ಕಿಳಿದರೂ ನನಗೆ ಚಿಂತೆಯಿಲ್ಲ. ಸಾವಿರದೆಣಿಕೆಯ ಕುಡುಕರು ಉಸಿರಾಡುತ್ತಿರುವ ರಾಷ್ಟ್ರ ಅದಾಗಬಾರದು[೮೨] ಹಾಗೂ 'ನನ್ನನ್ನು ಅಖಂಡ ಭಾರತದ ಸರ್ವಾಧಿಕಾರಿಯಾಗಿ ಒಂದು ಗಂಟೆಯ ಮಟ್ಟಿಗಾದರೂ ನೇಮಕ ಮಾಡಿದರೆ ಆಗ ನಾನು ಮಾಡುವ ವೊಟ್ಟ ವೊದಲನೆಯು ಕೆಲಸ ಯಾವ ಪರಿಹಾರವನ್ನೂ ಕೊಡದೇ ಹೆಂಡದಂಗಡಿಗಳನ್ನು ಮುಚ್ಚಿಸಿ ಬಿಡುತ್ತೇನೆ.[೮೩]

ರಾಷ್ಟ್ರಪಿತನು ಕಂಡ ಭಾರತ ಇಂದು ಏನಾಗಿದೆ? ಇಂದು ಭಾರತದ ಅಂದಾಜು ೮ ಲಕ್ಷ ಹಳ್ಳಿ-ಪಟ್ಟಣಗಳಲ್ಲಿ ನೀರು ಸಿಗುವುದು ಕಷ್ಟವೆನಿಸಿದರೂ ಬೀರು-

---

೮೨. ಯಂಗ್ ಇಂಡಿಯ ೧೫-೯-೧೯೨೭ ಪತ್ರಿಕೆಯಲ್ಲಿ 'ನನ್ನ ಕನಸಿನ ಭಾರತ'

೮೩. ಅದೇ ೨೫-೬-೧೯೩೧ "ನನ್ನ ಕನಸಿನ ಭಾರತ"

ಬ್ರ್ಯಾಂಡಿ-ಸೇಂದಿ-ಸರಾಯಿ ಸಿಗುವುದೇನೂ ಕಷ್ಟವೆನಿಸಿಲ್ಲ. ಹಾಲಿನ ಝುರಿ ಕಾಣ ಸಿಗದಿದ್ದರೂ ಹಾಲಾಹಲದ ಹೊಳೆಯು ಮಾತ್ರ ದೇಶವನ್ನೇ ಕೊಚ್ಚಿಕೊಂಡು ಒಯ್ಯುತ್ತಿದೆ. ಹಳ್ಳಿಯಿಂದ ದಿಲ್ಲಿಯವರೆಗೆ ಗಾಂಧಿತತ್ವದ ಮೇಲೆ ಊರು-ನಾಡು-ರಾಜ್ಯ-ರಾಷ್ಟ್ರ ನಿರ್ಮಿಸುತ್ತೇವೆಂದು ಹೇಳುವ ನಮ್ಮ ನೇತಾರರು ಆತ್ಮವಿಮರ್ಶೆ ಮಾಡಿಕೊಳ್ಳಬೇಕಾಗಿದೆ. ಗಾಂಧೀಜಿಯವರ ಮಾತು ಪಾಲಿಸದ ನಾವು ಗಾಂಧಿ ಜಯಂತಿ ಪುಣ್ಯತಿಥಿ ಮಾಡುವುದರಲ್ಲಿ ಏನಾದರೂ ಅರ್ಥವಿದೆಯೇ? 'ತಂಬಾಕು ಹೆಸರೇ ಸೂಚಿಸುವಂತೆ ತಮ್ಮ ಬಾಕು ತಮ್ಮದೇ ಚೂರಿ. ಇವರನ್ನು ಯಾರೂ ಕೊಲ್ಲಬೇಕಾಗಿಲ್ಲ. ತಮ್ಮ ಬಾಕು (ತಂಬಾಕು)ವಿನಿಂದ ತಾವೇ ತಿವಿದುಕೊಂಡು (ಸೇದಿ ಸೇದಿ) ಕ್ಯಾನ್ಸರ್ ಮುಂತಾದ ರೋಗಗಳಿಂದ ಕ್ಯಾನ್ಸಲ್ ಆಗುತ್ತಾರೆ.

ಇವೇ ಮುಂತಾದ ಚಟಗಳುಳ್ಳ ಮಾನವ ಬಂಧುಗಳು, ಬೀಡಿ-ತಂಬಾಕು-ಸಿಗರೇಟು ಸೇವನೆಯಿಂದ ತಾವೂ ಸಾಯುವುದಲ್ಲದೇ ತಾವು ಬಿಡುವ ಹೊಗೆಯಿಂದ ಪ್ರತಿವರ್ಷ ಲಕ್ಷಾವಧಿ ಮುಗ್ಧ ಮಕ್ಕಳ, ಸ್ತ್ರೀಯರ ಶ್ವಾಸಕೋಶ ಕ್ಯಾನ್ಸರ್‌ಕ್ಕೂ, ಸಾವಿಗೂ ಕಾರಣರಾಗುತ್ತಿದ್ದಾರಂತೆ! ಇಂತಹ ಪ್ರಜ್ಞಾವಂತರಿಗೆ ಯಾರು ಬುದ್ಧಿ-ತಿಳುವಳಿಕೆ ಕೊಡಲಾದೀತು?

ಹಲವಾರು ಸಲ ಶಿಕ್ಷಕರು (ಮನೆಗಳಲ್ಲಿ ಪಾಲಕರು, ಹಿರಿಯರು) ಹಣ ಕೊಟ್ಟು ವಿದ್ಯಾರ್ಥಿಗಳಿಂದ ಬೀಡಿ-ಸಿಗರೇಟು ತರಿಸಿ, ಸೇದಿ ಬಾಯಿ-ಮೂಗು ಕಣ್ಣುಗಳಿಂದ ಹೊಗೆ ಬಿಡುವ ಧೂಮ್ರವಲಯ ಕಂಡು, ಮುಗ್ಧ ಮನಸ್ಸಿನ ಹುಡುಗರು ಇದರಲ್ಲೇನೋ ಆನಂದ ಇದೆ, ಸುಖಾ ಇದೆ. ಮಜಾ ಇದೆಯೆಂದು ಭಾವಿಸಿ, ಶಿಕ್ಷಕರೋ, ತಂದೆಯೋ, ಯಾರೋ ಸೇದಿ ಒಗೆದ ತುಂಡುಗಳನ್ನು ಸೇದುವುದು. ಅದಕ್ಕಾಗಿ ಹಣ ಕದಿಯುವುದು ಶಾಲೆಯ ಫೀ, ಪುಸ್ತಕ-ನೋಟ್‌ಬುಕ್ ಹೆಸರು (ಹೇಳಿ) ಸುಳ್ಳು ಹೇಳಿ ಹಣ ತಂದು ಈ ದುಶ್ಚಟಗಳಿಗೆ ಬಲಿಯಾಗುತ್ತಾರೆ. ವಿದ್ಯಾರ್ಥಿಗಳಲ್ಲಿ ಅನುಕರಣೆ ಸ್ವಭಾವವಿರುತ್ತದೆ. ಗುರು-ಹಿರಿಯರನ್ನು ಅನುಸರಿಸುತ್ತಾರೆ. ನೀರು ತಗ್ಗಿನತ್ತ, ಪ್ರಪಾತದತ್ತ ಜೋರಾಗಿ ಹರಿಯುಂತೆ ಇವರೆಲ್ಲ ದುರ್ವ್ಯಸನ-ದುರಾಚಾರಗಳ ಪ್ರಪಾತದತ್ತ ಕೊಚ್ಚಿಕೊಂಡು ಹೋಗುತ್ತಾರೆ. **ಯಥಾ ಗುರು ತಥಾ ಶಿಷ್ಯ** ಎನ್ನುವಂತೆ **ಚೋರ ಗುರು-ಚಾಂಡಾಲ ಶಿಷ್ಯ**ರೂ ನಿರ್ಮಾಣಗೊಳ್ಳುತ್ತಾರೆಂದು ಸುಭಾಷಿತಕಾರನು ಹೇಳುತ್ತಾನೆ.

ಆದ್ದರಿಂದಲೇ ಡಾ. ರಾಧಾಕೃಷ್ಣನ್‌ರು ಕಳಕಳಿಯಿಂದ ಹೇಳುತ್ತಾರೆ. 'Character is destiny. Character is that on which the destiny of a nation is built. One can not have a great nation with men of small character if we Want to build a great nation. We must try to train a large number of young men and women

who have character.'[೮೪] ಅಂದರೆ ಚಾರಿತ್ರ್ಯವೇ ದೈವ. ಚಾರಿತ್ರ್ಯವೆಂಬ ದೈವದ ಮೇಲೆಯೇ ದೇಶದ ಭವಿತವ್ಯ ನಿರ್ಮಾಣಗೊಳ್ಳುತ್ತದೆ. ಸಣ್ಣ ಚಾರಿತ್ರ್ಯವಂತರಿಂದ ದೊಡ್ಡ ದೇಶ ನಿರ್ಮಾಣವಾಗಲಾರದು. ಸಚ್ಚಾರಿತ್ರವುಳ್ಳ ಹೆಚ್ಚಿನ ಸಂಖ್ಯೆಯ ಯುವಕ-ಯುವತಿಯರಿಗೆ ತರಬೇತಿ ನೀಡಬೇಕು. ಪ್ರತಿಯೊಬ್ಬ ಶಿಕ್ಷಕರು ಈ ಮಾತನ್ನು ಚಿಂತನ ಮಾಡಬೇಕು. ಶಿಕ್ಷಣದ ಎಲ್ಲ ಹಂತಗಳಲ್ಲಿರುವ ಶಿಕ್ಷಕರು ಸಾಮಾನ್ಯವಾಗಿ ಪ್ರಾಜ್ಞರೂ ತರಬೇತಿ ಹೊಂದಿದವರೂ, ಕಳಕಳಿಯುಳ್ಳವರೇ ಇರುತ್ತಾರೆ. ಅಪವಾದಾತ್ಮಕವಾಗಿ ಕೆಲವರನ್ನು ಹೊರತುಪಡಿಸಿದರೆ ಬಹಳಷ್ಟು ಜನರಿಗೆ ಈ ಪರಿಸರ ವಾತಾವರಣ ನೋಡಿ ನೋಡಿ ನಿರಾಶೆ ಉಂಟಾಗುತ್ತದೆ.

ಅನೇಕ ವೇಳೆ ಎಷ್ಟೋ ಜನ ಒಳ್ಳೆಯ ಶಿಕ್ಷಕರೇ **ನಮ್ಮಿಂದೇನಾಗ್ತದೆ ? ನಮಗ್ಯಾಕ ಬೇಕು? ನಮ್ಮನ್ಯಾರು ಕೇಳ್ತಾರ?** ಎಂಬ ಮೂರು ಪ್ರಶ್ನೆಗಳನ್ನು ಸಾಮಾನ್ಯವಾಗಿ ಮುಂದಿಡುತ್ತಾರೆ. ಈ ಮಾತುಗಳನ್ನು ಕೇಳಿದಾಗ ಇಂಥವರ ಹೇಡಿತನ, ಕರ್ತವ್ಯದಿಂದ ಪಲಾಯನವಾದವನ್ನು ನೋಡಿ ಜಿಗುಪ್ಸೆಯೆನಿಸುತ್ತದೆ. ರಾಷ್ಟ್ರ ನಿರ್ಮಿಸುವ (ವಿದ್ಯಾರ್ಥಿಗಳ ಚಾರಿತ್ರ್ಯ ನಿರ್ಮಿಸುವ) ಕಾರ್ಯ ಶಿಕ್ಷಕರಿಂದಲೇ ಆಗ್ತದೆ. ಶಿಕ್ಷಕರಿಗೇ ಬೇಕು, ವಿದ್ಯಾರ್ಥಿಗಳೇ ಕೇಳ್ತಾರ. ಇದರಲ್ಲಿಯೂ ಸಂಶಯ ಬಹಳ ಜನರಿಗೆ.

ಇಂದಿನ ರಾಜಕೀಯ ಪರಿಸ್ಥಿತಿಯ ಗೊಂದಲದಿಂದಾಗಿ, ಶಿಕ್ಷಕರೂ ಸಹ ತಮ್ಮ ಕರ್ತವ್ಯಗಳಿಂದ ಅಲ್ಲಲ್ಲಿ ವಿಮುಖರಾಗುತ್ತಿರುವುದು ಕಂಡುಬರುತ್ತಿದೆ. ಕೆಲವು ಶಿಕ್ಷಕರು ತಮ್ಮ ನಿಜ ಕರ್ತವ್ಯ ಮರೆತು ಊರ ಉಸಾಬರಿ ಮಾಡುತ್ತಾ, ರಾಜಕಾರಣಿಗಳ ಬೆನ್ನುಹತ್ತಿ ತಿರುಗುವುದು, ಮೇಲಧಿಕಾರಿಗಳ ಮರ್ಜಿಗಾಗಿ ಮೋಜು-ಮಜಾಗಳಲ್ಲಿ ತೊಡಗಿಸಿಕೊಂಡಿರುವುದು ಆತ್ಮಘಾತುಕತನವೆನಿಸಿದೆ.

ಸಮಾಜದ, ರಾಷ್ಟ್ರದ ಸುಂದರ ಭವಿತವ್ಯ ನಿರ್ಮಿಸಬೇಕಾದರೆ ವಿದ್ಯಾವಂತ ಶಿಕ್ಷಕ ವರ್ಗ ಕರ್ತವ್ಯಚ್ಯುತರಾದರೆ, ಅವರನ್ನೇ ನಂಬಿರುವ ವಿದ್ಯಾರ್ಥಿಗಳ ಭವಿಷ್ಯ ತುಂಬಾ ಕರಾಳ ಹಾಗೂ ಕಳವಳಕಾರಿಯಾಗಿದೆ. ಶಿಕ್ಷಕರು ದುರ್ಬಲರಾಗಬಾರದು. ಒಳ್ಳೆಯತನ ದೌರ್ಬಲ್ಯದ ಪ್ರತೀಕವಾಗಬಾರದು. ಸದುವಿನಯ ಹಾಗೂ ಧೀಮಂತತನಗಳು ಕರ್ತವ್ಯದ ಅಂತರಂಗ-ಬಹಿರಂಗವಾಗಬೇಕು.

ಸ್ವಾಮಿ ವಿವೇಕಾನಂದರ ಸಿಂಹವಾಣಿ ಆಲಿಸಿ 'our country requires heroes, be heores! Feel from the heart through the heart

---

೮೪. Speeches and writings Vol. p. 99

comes inspiration, Love opens the most impossible gates. Love is the gate to all the secrets of the universe.'[೮೫]

ನಮ್ಮ ದೇಶಕ್ಕಿಂದು ಧೀರರು ಬೇಕು. ಧೀರರಾಗಿರಿ. ಹೃದಯದಿಂದ ಭಾವಿಸಿರಿ. ಹೃದಯದ ಮೂಲಕವೇ ಉತ್ಸಾಹ (ಚೈತನ್ಯ) ಹೊರಬರುತ್ತದೆ. ಎಂತಹ ಕಠಿಣವಾದ ಬಾಗಿಲುಗಳನ್ನು ಕೂಡ ನಿಮ್ಮ ಹೃದಯದ ಪ್ರೀತಿ, ತೆರೆಯಿಸುತ್ತದೆ. ವಿಶ್ವದ ಎಲ್ಲ ರಹಸ್ಯಗಳಿಗೂ ಪ್ರೀತಿಯೇ ಹೆಬ್ಬಾಗಿಲಾಗಿದೆ.

ಡಾ. ರಾಧಾಕೃಷ್ಣನ್‌ರು ಹೇಳುತ್ತಾರೆ 'What is necessary is sincerity, integrity of Life compassion for humanity'.[೮೬] ಇಂದು ಬೇಕಾಗಿರುವುದು ಪ್ರಾಮಾಣಿಕ (ನಿಷ್ಕಾಪಟ್ಯ) ಪ್ರಯತ್ನ, ಜೀವನದ ಸಮಗ್ರತೆ ಮತ್ತು ಮಾನವತೆಯ ಬಗೆಗೆ ದಯೆ, ಕರುಣೆ, ಇಷ್ಟಿದ್ದರೆ ಸಾಕು, ಶಿಕ್ಷಕ ತನ್ನ ಬಾಳಿನಲ್ಲಿ ಸಾಧನೆಗೈಯಬಲ್ಲ. ಈ ಸಾಧನೆಯ ಫಲ ಖಂಡಿತ ಕಾಣಬಹುದು. ಜಗಜ್ಯೋತಿ ಬಸವಣ್ಣನವರು ಹೇಳುವಂತೆ 'ಕೂಡಲಸಂಗನ ಪೂಜಿಸಿದ ಫಲ ಅಂಗೈ ಮೇಲೆ' ಅಂದರೆ ಈಗಿರುವ ಶಿಕ್ಷಕರು ತಮ್ಮಲ್ಲಿಯ ಒಳ್ಳೆಯತನಕ್ಕೆ ತಮಗೆ ಕಲಿಸಿದ ಶಿಕ್ಷಕರನ್ನು ಸ್ಮರಿಸುವಂತೆ, ನಮ್ಮ ಒಳ್ಳೆಯತನವನ್ನು ನಮ್ಮ ವಿದ್ಯಾರ್ಥಿಗಳು ಪಡೆದುಕೊಳ್ಳುತ್ತಾರೆ.

ಒಟ್ಟಿನಲ್ಲಿ, ರಾಧಾಕೃಷ್ಣನ್‌ರು ಹೇಳುವಂತೆ 'A nation is built in its educational institutions. We have to train our youth in them. We have to impart to them the tradition of the future.'[೮೭]

ಶಿಕ್ಷಣ ಸಂಸ್ಥೆಗಳಲ್ಲಿ ರಾಷ್ಟ್ರ ಕಟ್ಟಲ್ಪಡುತ್ತದೆ. ಅಲ್ಲಿ ನಮ್ಮ ಯುವ ಜನತೆಯನ್ನು ತರಬೇತುಗೊಳಿಸಬೇಕು. ಭವಿಷತ್ ಭಾರತದ ಸಂಪ್ರದಾಯವನ್ನು ನಾವು ಅವರಲ್ಲಿ ಬಿತ್ತಬೇಕು. ಇಂದು ದೇಶಕ್ಕೆ ಬೇಕಾಗಿರುವ ಬಹು ದೊಡ್ಡ ಅವಶ್ಯಕತೆ ಎಂದರೆ ಶಿಸ್ತು. 'The country's greatest need, today is discipline, from top to bottom, it is discipline that we want.'[೮೮] ಆ ಶಿಸ್ತು ಮೇಲಿನಿಂದ ಕೆಳಗಿನವರೆಗೂ, ಅಂದರೆ ದಿಲ್ಲಿಯಿಂದ ಹಳ್ಳಿಯವರೆಗೂ ಮೂಡಿ ಬರಬೇಕು ಎಂದು ರಾಧಾಕೃಷ್ಣನ್ ತಿಳಿಸುತ್ತಾರೆ.

---

೮೫. India and Her Problems (Ed.) p. 25
೮೬. True knowledge, p. 100
೮೭. True knowldge, p. 56
೮೮. Ibid, p. 111

ಶಿಕ್ಷಕನೆಂದರೆ ಶಿಸ್ತಿನ ಸಿಪಾಹಿ, ಪ್ರಜಾಪ್ರಭುತ್ವದ ಒಳ್ಳೆಯ ನಾಗರಿಕರನ್ನು ನಿರ್ಮಿಸುವ ಶಿಸ್ತುಗಾರ ಶಿಕ್ಷಕ. ಶಿಕ್ಷಕ ವೃತ್ತಿ ವ್ಯಾಪಾರವಾಗಬಾರದು. ಅದೊಂದು ದೇಶದ ಕರೆ, ತ್ಯಾಗ, ಧರ್ಮ ಪ್ರಸಾರವಿದ್ದಂತೆ ಎಂದು ಡಾ. ರಾಧಾಕೃಷ್ಣನ್‌ರು ಹೇಳುತ್ತಾರೆ. 'The profession of the teacher should not be reduced to a trade. It is a calling, a vocation, a mission. It is the duty of the teachers to make pupils good citizens of the new democracy.'[೮೯]

**ಶಿಕ್ಷಕರು ರಾಜಕೀಯದಲ್ಲಿರಬಾರದು, ರಾಜಕೀಯ ಮಾಡಬಾರದು.** ಆದರೆ ಈ ದೇಶದ ಒಬ್ಬ ಪ್ರಜ್ಞಾವಂತ ಪ್ರಜೆಯೂ ಶಿಕ್ಷಕನಾಗಿರುವುದರಿಂದ ರಾಜಕೀಯ ಜ್ಞಾನದ ಸಂಪೂರ್ಣ ಅರಿವಿರಬೇಕು. ದೇಶದ ಆಗುಹೋಗುಗಳ ಬಗ್ಗೆ ಪ್ರಜ್ಞೆಯಿರಬೇಕು. ತನ್ನ ವೃತ್ತಿಗೆ ಅಪಚಾರ ಬಗೆದು ರಾಜಕೀಯ ಮಾಡದೇ ಇಡೀ ಆಂತರಿಕ ಭದ್ರತೆಗೆ ಧಕ್ಕೆಯುಂಟಾದಾಗ, ದೇಶಕ್ಕೆ ಗಂಡಾಂತರ ಎದುರಾದಾಗ ಆತ ಧೀರನಾಗಿ ಸಮಸ್ಯೆಯ ಪರಿಹಾರಕ್ಕಾಗಿ ಶ್ರಮಿಸಬೇಕು. ಯಾವುದೇ ರಾಜಕೀಯ ಪಕ್ಷ-ಪಂಗಡಗಳಿಗೆ ಸೇರಿಕೊಂಡು ವಿದ್ಯಾರ್ಥಿ ಸಮುದಾಯದಲ್ಲಾಗಲೀ, ಶಿಕ್ಷಣ ಸಂಸ್ಥೆಗಳಲ್ಲಾಗಲೀ ಅಶಿಸ್ತು, ಅವ್ಯವಸ್ಥೆಗೆ ಕಾರಣವಾಗಬಾರದು.

ಡಾ. ರಾಧಾಕೃಷ್ಣನ್‌ರು ಈ ಬಗ್ಗೆ 'A true teacher must also be a seeker.... The advancement of knowledge is as essential as the diffusion of it.'[೯೦] ಎಂದು ತಿಳಿಸುತ್ತಾರೆ.

ನಮ್ಮ ದೇಶದ ಅದರ ಭವ್ಯ ಪರಂಪರೆ, ದೇಶದ ಹಿಂದಿನ ಹಿರಿಯರ ತ್ಯಾಗ-ಬಲಿದಾನಗಳ ಅರಿವು ಶಿಕ್ಷಕನಿಗಿರಬೇಕು. ಹತ್ತಾರು ಧರ್ಮಗಳ, ನೂರಾರು ಮತ-ಪಂಗಡಗಳ ೧೨೮ ಕೋಟಿ ಜನ ವಾಸಿಸುತ್ತಿರುವ ವಿಚಿತ್ರ ವೈವಿಧ್ಯಮಯ ದೇಶ ನಮ್ಮದು. ಶಿಕ್ಷಕನಲ್ಲಿ ಭಾವೈಕ್ಯ ದೃಷ್ಟಿಕೋನವಿರಬೇಕು. ಜಾತ್ಯತೀತ ಮನೋಭಾವನೆಯುಳ್ಳವನಾಗಿರಬೇಕು. ಜಾತೀಯತೆ-ಅಸ್ಪೃಶ್ಯತೆ-ಅಸಮಾನತೆಗಳು ವಿದ್ಯಾರ್ಥಿಗಳಲ್ಲಿ ಬೆಳೆಯದಂತೆ ಎಚ್ಚರ ವಹಿಸಬೇಕು. **ಮೂಢನಂಬಿಕೆ-ಅಂಧಶ್ರದ್ಧೆಗಳಿಂದ ದೇಶ ಹಾಳಾಗುತ್ತಿದೆ.** ಈ ಪ್ರಜ್ಞೆಯನ್ನು ವಿದ್ಯಾರ್ಥಿಗಳಲ್ಲಿ ಶಿಕ್ಷರು ಮೂಡಿಸುತ್ತಿರಬೇಕು. ಧಾರ್ಮಿಕ ಹಬ್ಬಗಳು-ಸಾಂಸ್ಕೃತಿಕ ಹಬ್ಬಗಳು ದೇಶದ ಏಕತೆಯನ್ನು ಸಾರುತ್ತವೆ ಎಂದು ಡಾ. ರಾಧಾಕೃಷ್ಣನ್‌ರು ತಿಳಿಸುತ್ತಾರೆ. ಆದರೆ ಇಂದು

---

೮೯. Ibid, p. 34

೯೦. India and China, p. 56

ಈ ಹಬ್ಬಗಳ ದೆಸೆಯಿಂದಾಗಿ ಸ್ವಾರ್ಥ-ಪಟ್ಟಭದ್ರರಿಂದಾಗಿ ಕೋಮು ಗಲಭೆ ಹಿಂಸಾಚಾರ ಅತಿರೇಕವಾಗುತ್ತಿರುವುದು ಕಂಡುಬರುತ್ತಿದೆ. ಕಾರಣ ನಮ್ಮ ನಮ್ಮ ಧಾರ್ಮಿಕ ಹಬ್ಬಗಳ ಆಚರಣೆ-ಪೂಜೆ -ಪುನಸ್ಕಾರಗಳು ನಮ್ಮ ನಮ್ಮ ಮನೆ-ಕುಟುಂಬಗಳಿಗೆ ಸೀಮಿತವಾಗಿದ್ದು, ಶಾಲೆ-ಕಾಲೇಜುಗಳಂತಹ ಸಾರ್ವಜನಿಕ ಶಿಕ್ಷಣ ಸಂಸ್ಥೆಗಳಲ್ಲಿ ಯಾವುದೇ ಒಂದು ಧರ್ಮದ ಹಬ್ಬಗಳ ಆಚರಣೆ ನಡೆಯಬಾರದು. ಅದರ ಬದಲಿಗೆ ಸಮಗ್ರ ರಾಷ್ಟ್ರೀಯ ಅಭಿಮಾನ, ಭಾವೈಕ್ಯತೆ, ಪ್ರೇಮ-ಸೌಹಾರ್ದತೆ ಬೀರುವ ರಾಷ್ಟ್ರೀಯ ಹಬ್ಬಗಳು, ರಾಷ್ಟ್ರಪಿತನ ಜಯಂತಿ ಮುಂತಾದವು ಜರುಗಬೇಕು.

ಇನ್ನು ಬಹಳಷ್ಟು ಜನ ಶಿಕ್ಷಕರು ತಮ್ಮ ತಮ್ಮ ಕುಟುಂಬ-ಧರ್ಮ-ಮತಗಳ ಹಿನ್ನೆಲೆಯಲ್ಲಿ ಹಲವಾರು ನಂಬಿಕೆ-ಶ್ರದ್ಧೆ ಬೆಳೆಸಿಕೊಂಡಿರುತ್ತಾರೆ. ಅವನ್ನು ಅವರು ಸಾರ್ವತ್ರಿಕವಾಗಿ ತಮ್ಮ ವಿದ್ಯಾರ್ಥಿ ಸಮುದಾಯದ ಮೇಲೆ ಒತ್ತಾಯದಿಂದ ಹೇರಬಾರದು. **ಶಿಶುವಿಹಾರಗಳಿಂದಲೇ ಮೂಢನಂಬಿಕೆ-ಅಂಧಶ್ರದ್ಧೆ** ಬೆಳೆಸುವುದನ್ನು ಡಾ. ರಾಧಾಕೃಷ್ಣನ್ ಖಂಡಿಸುತ್ತಾರೆ. ಅದರ ಬದಲಿಗೆ 'ಮಾನವರೆಲ್ಲರೂ ಒಂದೇ ಎಂಬುದನ್ನು ನಂಬುವಂತೆ ಜನರಿಗೆ ಬಾಲ್ಯದಿಂದಲೇ ಶಿಕ್ಷಣ ಕೊಡಬೇಕು. ಶಾಂತಿ ರಕ್ಷಣೆಯ ಮನೋಧರ್ಮವು ಅವರಲ್ಲಿ ವೃದ್ಧಿಯಾಗುವಂತೆ ಮಾಡಬೇಕು. ಮಾನವ ವರ್ಗವೇ ಒಂದು ಕುಟುಂಬವೆಂಬುದು ಅವರಿಗೆ ಮನವರಿಕೆಯಾಗುವಂತೆ ಮಾಡಬೇಕು' ಹಾಗೂ 'ಸ್ವದೇಶಾಭಿಮಾನವು ಶ್ರೇಷ್ಠವಾದ ಗುಣ. ಆದರೆ ಅದು ನಿರ್ದೋಷವಾಗಿರಬೇಕು.'[೯೧] 'ಜನರ ಅಂತಃಕರಣಗಳು ಒಂದಾಗಬೇಕು. ಜನರಲ್ಲಿ ತಾವೆಲ್ಲರೂ ಒಂದೇ ಎಂಬ ಆತ್ಮೀಯತೆಯು ವೃದ್ಧಿಯಾಗಬೇಕು. ಇದು ಸಾಧ್ಯವಾಗಬೇಕಾದರೆ, ಇಂದಿನ ಸನ್ನಿವೇಶದಲ್ಲಿ ವಿಲಕ್ಷಣವಾಗಿ ತೋರುವ ಪ್ರಾಚೀನ ಕಾಲದ ಆಲೋಚನಾ ಸರಣಿಗಳನ್ನು, ಗೊಡ್ಡು ನಂಬಿಕೆಗಳನ್ನು, ಅರ್ಥವಿಲ್ಲದ ಆಚರಣೆಗಳನ್ನು ಬಿಟ್ಟುಬಿಡುವುದು ಅತ್ಯವಶ್ಯವಾಗಿ ನಡೆಯಬೇಕಾದ ಪೂರ್ವಸಿದ್ಧತೆ'.[೯೨]

ವಿದ್ಯಾರ್ಥಿಗಳ ಚಾರಿತ್ರ್ಯ ನಿರ್ಮಾಣ, ಜ್ಞಾನೋಪದೇಶ ಮಾಡಬೇಕಾದ **ಶಿಕ್ಷಕ ಮೊದಲಿಗೆ ತನ್ನ ಚಾರಿತ್ರ್ಯ ನಿರ್ಮಾಣ ಮಾಡಿಕೊಂಡಿರಬೇಕು.** ಲೋಕದ ಡೊಂಕು ತಿದ್ದುವ ಪೂರ್ವದಲ್ಲಿ ತನ್ನ ಡೊಂಕನ್ನು ತಿದ್ದಿಕೊಳ್ಳಬೇಕು. ಶ್ರೇಷ್ಠ ಶಿಕ್ಷಣತಜ್ಞ ವಿಶ್ವಗುರು ಬಸವಣ್ಣನವರ ಎಚ್ಚರಿಕೆ-ಲೋಕದ ಡೊಂಕ ನೀವೇಕೆ

---

೯೧. ಕಲ್ಕಿ ಅಥವಾ ನಾಗರಿಕತೆಯ ಭವಿಷ್ಯ. ಪು. ೧೫೫, ೧೫೬

೯೨. ಅದೇ. ಪು. ೧೨, ೧೩

ತಿದ್ದುವಿರಿ? ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ, ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ'ಎಂಬುದನ್ನು ಅರಿತುಕೊಂಡು, ತಾನು ಒಳ್ಳೆಯವನಾಗಿ ಬಾಳಿದರೆ ವಿದ್ಯಾರ್ಥಿಗಳು ಸಹಜವಾಗಿಯೇ ಅನುಕರಣೆ ಮಾಡುತ್ತಾರೆ. ಇಲ್ಲದಿದ್ದರೆ ಶಿಕ್ಷಕ ಹೇಳೋದು ಆಚಾರ, ತಿನ್ನೋದು ಬದನೆಕಾಯಿಯಾದಂತಾಗುತ್ತದೆ. ಶಿಕ್ಷಣ ತಜ್ಞ ಡಾ. ಜವರೇಗೌಡರು 'ತನ್ನನ್ನು ಉನ್ನತಗೊಳಿಸಲಾಗದ, ಕ್ಷಣಕ್ಷಣಕ್ಕೂ ನೂತನ ಭಾವನೆಗಳನ್ನು ಮೂಡಿಸದ, ದಿನ ದಿನವೂ ಜೀವನವನ್ನು ಹೊಸದುಗೊಳಿಸದ, ಅನಾತ್ಮತೆಯನ್ನು ಮೀರಿ ಆತ್ಮತತ್ತ್ವದ ಕಡೆಗೆ ಮಾನವನನ್ನೊಯ್ಯದ ವಿದ್ಯೆ ಅಸಾರ್ಥಕವಾಗುತ್ತದೆ'[೯೩] ಎನ್ನುತ್ತಾರೆ.

**ಭೌತಿಕ ವಿದ್ಯೆಗಳಿಗೆ ಆತ್ಮವಿದ್ಯೆ ತಳಹದಿಯಾಗಬೇಕು** ಎಂಬುದು ಡಾ. ರಾಧಾಕೃಷ್ಣನ್ ನಿಲುವಾಗಿದೆ. ನೀತಿಯ ಶಿಕ್ಷಣ ಕಡ್ಡಾಯವಾಗಬೇಕು. ದೇಹ ಪುಷ್ಟಿ, ಮನ ಏಕಾಗ್ರತೆ, ಆತ್ಮವಿಕಾಸಗಳು ಶಿಕ್ಷಣದ ಮೂಲ ಗುರಿಯಾಗಬೇಕು.

ಡಾ. ರಾಧಾಕೃಷ್ಣನ್‌ರು ನಮ್ಮ ಶಿಕ್ಷಣ ವ್ಯವಸ್ಥೆಯ ದೋಷಗಳನ್ನು ನಿವಾರಿಸಲು ಮಹಾತ್ಮಾ ಗಾಂಧೀಜಿಯವರು ಸೂಚಿಸುವ 'ಮೂಲ ಶಿಕ್ಷಣ'ವನ್ನು ಪುರಸ್ಕರಿಸುತ್ತಾರೆ 'Basic education is an attempt to avoid mere book learning and adopt learning through doing.'[೯೪]

ಇಂದು ಕೇವಲ ಪುಸ್ತಕ ಓದಿ, (ಕಾಫಿ ಹೊಡೆದು?) ಪಾಸಾಗುವ, ಪದವಿ ಪಡೆಯುವ ಲಕ್ಷಾವಧಿ ಯುವಕರು, ಮಾಡಿದರೆ ನೌಕರಿ ಮಾಡಬೇಕು, ಇಲ್ಲದಿದ್ದರೆ ನಿರುದ್ಯೋಗಿಯಾಗಿ ಅಲೀತಾ ಇರುವುದೆಂಬ ಮನೋಭಾವ ತಾಳಿದ್ದಾರೆ. ಹದಿನಾರು ಕೋಟಿ ಮೇಲ್ಪಟ್ಟು ನಿರುದ್ಯೋಗಿಗಳಾಗಿರುವ ವಿದ್ಯಾವಂತರೆಲ್ಲರಿಗೂ ನೌಕರಿ ಸಿಗಲು ಸಾಧ್ಯವಂತೂ ಇಲ್ಲ. ಅಂದಾಗ 'ಮೂಲ ಶಿಕ್ಷಣ' ಬಳಕೆಯಲ್ಲಿ ಬರಬೇಕು. ಹಲವಾರು ಮೂಲೋದ್ಯೋಗಗಳನ್ನು ಕಡ್ಡಾಯವಾಗಿ ವಿದ್ಯಾರ್ಥಿಗಳಿಗೆ ಕಲಿಸಬೇಕು. ಶಿಕ್ಷಣ ಕ್ರಮದಲ್ಲಿ ಅಳವಡಿಸಿದರೆ ಅವರಲ್ಲಿ ಸ್ವಾವಲಂಬನೆ -ಸ್ವಾಭಿಮಾನ ಮೂಡಲು ಸಾಧ್ಯವಾದೀತು.

**ಶಿಕ್ಷಣ-ಭಾಷಾ ಮಾಧ್ಯಮ** ಡಾ. ರಾಧಾಕೃಷ್ಣನ್ ಹೇಳುತ್ತಾರೆ, 'The true way to touch the heart of the people would be to make the regional languages the means for the Spread of knowldge. This is the only way to carry the things to every corner of India.'[೯೫] ಆಯಾ ಮಾತೃಭಾಷೆಗಳಲ್ಲಿ ಶಿಕ್ಷಣ ಪ್ರಸಾರ ಮಾಡಬೇಕು ಎಂದು

೯೩. ಶ್ರೀ ಕುವೆಂಪು ದೃಷ್ಟಿಯಲ್ಲಿ ಬಸವಣ್ಣನವರು (ಬಸವಪಥ) ಪು. ೭೫
೯೪. Speeches and writings Vol. 1, p. 249
೯೫. The Philosophy of Tagore, p. 130

ತಿಳಿಸುತ್ತಾ ತ್ರಿಭಾಷಾ ಸೂತ್ರವನ್ನು ಅನುಸರಿಸಲು ಹೇಳುತ್ತಾರೆ, 'The three language formula adopted by many states, which requires all students to learn the mother tongue. Hindi and English, if implemented properly, will contribute to a Sound knowldge of all the three. We should try to do so.'[೯೬] ಡಾ. ರಾಧಾಕೃಷ್ಣನ್‌ರ ಅಭಿಪ್ರಾಯದಂತೆ ನಮ್ಮ ದೇಶದ ಪ್ರತಿಯೊಂದು ರಾಜ್ಯವೂ ತ್ರಿಭಾಷಾ ಸೂತ್ರವನ್ನು ಅಳವಡಿಸಿಕೊಳ್ಳಬೇಕು. ಇದರಿಂದ ವಿದ್ಯಾರ್ಥಿಗಳು ತಮ್ಮ ಮಾತೃಭಾಷೆ, (ಉದಾಹರಣೆಗೆ ಕರ್ನಾಟಕದಲ್ಲಿ ಕಲಿಯುವ ಎಲ್ಲ ವಿದ್ಯಾರ್ಥಿಗಳು ಕನ್ನಡ); ನಮ್ಮ ರಾಷ್ಟ್ರ ಭಾಷೆ (ಹಿಂದಿ) ಹಾಗೂ ಒಂದು ವಿದೇಶಿ ಭಾಷೆ (ಇಂಗ್ಲೀಷ) ಮೂರನ್ನು ಚೆನ್ನಾಗಿ ಕಲಿತರೆ ಒಳ್ಳೆಯ ಜ್ಞಾನಾರ್ಜನೆಗೆ ಅನುಕೂಲವಾಗುತ್ತದೆ.

**ಇಂದು ಭಾಷಾ ಸಮಸ್ಯೆಯು** ನಮ್ಮ ದೇಶದ ಬಹು ದೊಡ್ಡ ಸಮಸ್ಯೆಯಾಗಿ ಪರಿಣಮಿಸಿದೆ. ದೇಶದ ಏಕತೆಗೆ-ಭದ್ರತೆಗೆ ಬಾಧಕವಾಗುತ್ತಿದೆ. ಅಂಧ ಭಾಷಾಭಿಮಾನದಿಂದಾಗಿ ರಾಷ್ಟ್ರ ಸಂಪತ್ತು ನಾಶವಾಗುತ್ತಿದೆ. ಇದರಿಂದ ಪಾರಾಗುವ ಏಕೈಕ ವಿಧಾನವೆಂದರೆ ಕಾಶ್ಮೀರದಿಂದ ಕನ್ಯಾಕುಮಾರಿಯವರೆಗಿನ ಸಮಗ್ರ ದೇಶವನ್ನು ಆಡಳಿತಾತ್ಮಕವಾಗಿ ನೂರಾರು ವಿಭಾಗಗಳನ್ನು ರಚಿಸಿ ಭಾಷಾವಾರು ಪ್ರಾಂತಗಳನ್ನು ವಿಸರ್ಜಿಸಿ, ಅವರವರ ಮಾತೃಭಾಷೆ, ರಾಷ್ಟ್ರಭಾಷೆ ಒಂದು ವಿದೇಶಿ ಭಾಷೆ ಅಥವಾ ಯಾವುದಾದರೂ ಇನ್ನೊಂದು ಪಕ್ಕದ (ರಾಜ್ಯಗಳ) ಭಾಷೆ ಹೀಗೆ ತ್ರಿಭಾಷಾ ಸೂತ್ರ ಶಿಕ್ಷಣದಲ್ಲಿ, ಆಡಳಿತದಲ್ಲಿ ಆಳವಡಿಸಿದರೆ ಈ ಸಮಸ್ಯೆಗೆ ಪರಿಹಾರವಾದೀತೇನೋ!

ಪ್ರಾಥಮಿಕ-ಮಾಧ್ಯಮಿಕ-ಕಾಲೇಜು ಹಂತಗಳಲ್ಲಿ ಶಿಕ್ಷಣ ಮೀಸಲಾತಿ ತೆಗೆದು ಹಾಕಿ, ಈ ದೇಶದ ಪ್ರತಿಯೊಬ್ಬ ಬಾಲಕ (ರಶಿಯಾದಲ್ಲಿಯಂತೆ) ಕಡ್ಡಾಯವಾಗಿ ವಿದ್ಯೆ ಕಲಿಯುವಂತೆ ಕಾರ್ಯರೂಪಿಸಬೇಕು. ಶಿಶುವಿಹಾರದಿಂದ ಉನ್ನತ ಶಿಕ್ಷಣದವರೆಗೆ ಉಚಿತ-ಕಡ್ಡಾಯ ವಿದ್ಯಾರ್ಜನೆ ಬೇಕು, ಪ್ರವೇಶ ದೊರಕಿಸುವಾಗ ಅರ್ಜಿ ಫಾರಂನಲ್ಲಿ ಜಾತಿ-ಉಪಜಾತಿಗಳನ್ನೂ ಬರೆಯದೇ ಕೇವಲ ರಾಷ್ಟ್ರೀಯತೆ ಮಾತ್ರ ಇರಬೇಕು. ಶಿಕ್ಷಣ ವ್ಯವಸ್ಥೆಯಿಂದಲೇ ಜಾತೀಯತೆ-ಅಸ್ಪೃಶ್ಯತೆ ಅಳಿಸಲು ಸಾಧ್ಯವಾಗುತ್ತದೆ.

ವಿದ್ಯಾರ್ಥಿ (ಶಿಶು)ಕೇಂದ್ರೀಕೃತ ಶಿಕ್ಷಣ ಪದ್ಧತಿಯಲ್ಲಿ ಇನ್ನಿತರ ಎಲ್ಲರ ಪಾತ್ರವೂ ಬಹು ಮುಖ್ಯವಾಗಿರುತ್ತದೆ. ವಿದ್ಯಾರ್ಥಿಯ ಮೃದು ಮನಸ್ಸು ಅರಳಬೇಕು, ಬುದ್ಧಿ ಚುರುಕಾಗಬೇಕು, ಭಾವ ವಿಶಾಲವಾಗಬೇಕು. ಶರೀರ ಸದೃಢವಾಗಬೇಕು.

---

೯೬. Speeches and writings p. 224

ಆತನಲ್ಲಿ ಸದುವಿನಯ, ಸದಾಚಾರ-ಕರ್ತವ್ಯನಿಷ್ಠೆ, ದೇಶಪ್ರೇಮ, ಮಾನವೀಯತೆ, ದೈವೀ ನಂಬಿಕೆ (ವಿಶ್ವಚೇತನದಲ್ಲಿ ಶ್ರದ್ಧೆ) ಆತ್ಮಬಲ ವೃದ್ಧಿಯಾಗುವಂತೆ ಶಿಕ್ಷಕರು-ಪಾಲಕರು ಎಚ್ಚರಿಕೆ ವಹಿಸಬೇಕು. 'It is the function of a teacher not to give the pupils what they want but make them want what he gives them'[೯೭] ಎಂದು ಡಾ. ರಾಧಾಕೃಷ್ಣನ್‌ರು ತಿಳಿಸುತ್ತಾರೆ. ಶಿಕ್ಷಕನ ಕರ್ತವ್ಯವೆಂದರೆ ವಿದ್ಯಾರ್ಥಿಗಳ ಸರಿಯಾದ ಅರ್ಹತೆ-ಯೋಗ್ಯತೆ-ಸುಪ್ತ ಪ್ರತಿಭೆಯನ್ನನುಸರಿಸಿ ಅವರಿಗೆ ಶಿಕ,ಣ ನೀಡಬೇಕು.

**'ಉನ್ನತ ಶಿಕ್ಷಣ'** ಬಗ್ಗೆಯೂ ಡಾ. ರಾಧಾಕೃಷ್ಣನ್ ಬಹಳಷ್ಟು ಚಿಂತನ ಮಾಡಿದ್ದಾರೆ. ವಿಶ್ವದ್ಯಾಲಯಗಳು ನಮ್ಮ ದೇಶದಲ್ಲಿ ನೂರಾರು ಇವೆ. ಅವುಗಳಿಂದ ಪ್ರತಿವರುಷ ಸಹಸ್ರಾರು ಸ್ನಾತಕೋತ್ತರ ಪದವಿ ಪಡೆದ ಪದವೀಧರರು ಒಂದೊಂದು ವಿಷಯದಲ್ಲಿ ಪರಿಣಿತರಾಗಿ ಹೊರಬರುತ್ತಾರೆ. ಆದರೆ ಅವರ ದೃಷ್ಟಿಕೋನ ಹೇಗಿರಬೇಕು? ವಿಶ್ವವಿದ್ಯಾಲಯಗಳು ಏನನ್ನು ಮಾಡಬೇಕು ಎಂಬುದನ್ನು ಡಾ. ರಾಧಾಕೃಷ್ಣನ್‌ರು ತಿಳಿಸುತ್ತಾರೆ.

'A University should give a universal outlook. When students pursue different courses, meet together in a common felowship. When they enter in to the society of good and great men, they enlarge their lives and characters.[೯೮] ವಿಶ್ವವಿದ್ಯಾಲಯ ವಿಶ್ವವಿಶಾಲ ದೃಷ್ಟಿ ಬೆಳೆಸಬೇಕು. ಬೇರೆ ಬೇರೆ ಕೋರ್ಸಗಳನ್ನು ಆಯ್ಕೆ ಮಾಡಿಕೊಂಡಿರುವ ವಿದ್ಯಾರ್ಥಿಗಳು ಆಗಾಗ ಒಟ್ಟಿಗೆ ಕೂಡಿ ತಮ್ಮ ತಮ್ಮ ವಿಷಯುಗಳ ಚಿಂತನ ವಾಡಿ ಪರಸ್ಪರರ ಜ್ಞಾನವನ್ನು ಹಂಚಿಕೊಂಡು ಪೂರ್ಣಜ್ಞಾನಿಗಳಾಗಿ ಸಮಾಜದ ಬದುಕಿಗೆ ಬರಬೇಕು.

ವಿಶ್ವವಿದ್ಯಾಲಯಗಳಲ್ಲಿ ನಾವಿಂದು ಕಾಣುತ್ತಿರುವ ಬಹು ದೊಡ್ಡ ಕೊರತೆಯೆಂದರೆ ಎಲ್ಲ ವಿಷಯಗಳ ವಿಭಾಗಗಳ ನಡುವೆ ಚಿಂತನ-ಚರ್ಚೆಯ ಅಭಾವ. ನಾನು ವಿಶ್ವವಿದ್ಯಾಲಯದಲ್ಲಿ ತತ್ತ್ವಶಾಸ್ತ್ರ, ಹಿಂದಿ, ಯೋಗ ಶಿಕ್ಷಣ ಅಧ್ಯಯನ ಮಾಡಲು ನಾಲ್ಕಾರು ವರ್ಷ ವಿದ್ಯಾರ್ಥಿಯಾಗಿದ್ದಾಗ ಅನಂತರ ಕರ್ನಾಟಕ ಕಾಲೇಜಿನಲ್ಲಿ ತತ್ತ್ವಶಾಸ್ತ್ರದ ಪ್ರಾಧ್ಯಾಪಕನಾಗಿ ಬೋಧನೆಯ ವರ್ಷಗಳಲ್ಲಿ; ನಮ್ಮ ತತ್ತ್ವಶಾಸ್ತ್ರದ ಹಿರಿಯ ಪ್ರಾಧ್ಯಾಪಕರು ಈ ಕುರಿತು ಬಹಳ ಕಳಕಳಿ

---

೯೭. The Creative Life, p. 53
೯೮. True knowldge p. 56

ವ್ಯಕ್ತಪಡಿಸುತ್ತಿದ್ದರು. 'Inter-Departmental Discussions' ನಡೆಯಬೇಕೆಂದು, ಈ ಬಗ್ಗೆ ತಕ್ಕಮಟ್ಟಿಗೆ ಪ್ರಯತ್ನ ಕೂಡ ಮಾಡಿದೆವು. ಆದರೆ ಬಹಳಷ್ಟು ಜನ ಆಸಕ್ತಿಯನ್ನೇ ತೋರಿಸುತ್ತಿರಲಿಲ್ಲ. ಕೆಲವರಿಗೆ ಎಲ್ಲಿ ತಮ್ಮ ಅರೆಜ್ಞಾನ ಹೊರಬಂದು ಎಲ್ಲರಿಗೂ ಗೊತ್ತಾಗುತ್ತದೆಯೋ ಎಂಬ ಭೀತಿಯೂ ಇದ್ದಿರಬಹುದು. ಮತ್ತೆ ಕೆಲವರಿಗೆ ತಾವು ಎಲ್ಲವನ್ನೂ ತಿಳಿದುಕೊಂಡಿದ್ದೇವೆ. ಇನ್ನು ತಿಳಿದುಕೊಳ್ಳುವುದು ಏನೂ ಉಳಿದಿಲ್ಲ ಎಂಬ ಭಾವನೆಯೂ ಇದ್ದಿರಬಹುದು. ಒಟ್ಟಿನಲ್ಲಿ ಉತ್ತೇಜನ ದೊರೆಯಲಿಲ್ಲ.

ಇಂದು ಪ್ರತಿಯೊಬ್ಬ ವಿಷಯ ಪ್ರಾಧ್ಯಾಪಕ ಕೇವಲ ತನ್ನ ವಿಷಯದಲ್ಲಿ ಮಾತ್ರ ಪರಿಣಿತನಾದರೆ ಸಾಲದು. ಇನ್ನಿತರ ವಿಷಯ ಜ್ಞಾನವನ್ನೂ ಅರಿತವನಾಗಿರಬೇಕು. ಇಂದು ಬಹಳಷ್ಟು ಜನ ಪಾರಿವಾಳ ಗೂಡಿನಂತೆ ತಮ್ಮ ತಮ್ಮ ಗೂಡಿನಲ್ಲಿಯೇ ಒಂಟಿಯಾಗಿರುವುದು ಕಂಡುಬರುತ್ತಿದೆ. ಒಂದೇ ವಿಭಾಗದಲ್ಲಿಯ ಪ್ರಾಧ್ಯಾಪಕರಲ್ಲಿಯೂ ಸೌಹಾರ್ದತೆ-ಪ್ರತಿಭೆಗೆ ಪುರಸ್ಕಾರಕ್ಕಿಂತ ಸ್ವಜಾತಿಯ ವಿದ್ಯಾರ್ಥಿಗಳಿಗೆ ಪುರಸ್ಕಾರಗಳು ಹೆಚ್ಚುತ್ತಿರುವುದೂ ನಮ್ಮ ದೇಶದ ದುರದೃಷ್ಟಕರವೆಂದೂ, ಉನ್ನತ ಶಿಕ್ಷಣಕ್ಕಾಗುತ್ತಿರುವ ಅಪಚಾರವೆಂದೂ ಹೇಳಿದರೆ ತಪ್ಪಾಗಲಿಕ್ಕಿಲ್ಲ. (ಸ್ವತಃ ನಾನು ಈ ಜಾತಿ ವಿಷವೃತ್ತದ ದುಷ್ಪರಿಣಾಮದ ಪರಿಣಾಮವಾಗಿಯೇ ತತ್ವಶಾಸ್ತ್ರ ಪ್ರಾಧ್ಯಾಪಕ ಹುದ್ದೆಯಿಂದ ವಂಚಿತನಾಗಬೇಕಾಯ್ತು.)

ಇಂದು ಮನುಷ್ಯ ಉನ್ನತ ಶಿಕ್ಷಣ ಪಡೆದಂತೆಲ್ಲ ಜಾತಿ ಭಾವನೆ ಹೆಚ್ಚುತ್ತಿದೆ. ಅವಿದ್ಯಾವಂತ ಹಳ್ಳಿಯ ಜನರಲ್ಲಿ ಪ್ರೇಮ ಬಾಂಧವ್ಯವು ಈ ವಿದ್ಯಾವಂತರಲ್ಲಿ ಎಳ್ಳು ಕಾಳಿನಷ್ಟು ಮುಳ್ಳು ಮೊನೆಯಷ್ಟು ಉಳಿದು-ಬೆಳೆದು ಬಂದಿದ್ದರೂ ದೇಶದ ಭವಿತವ್ಯ ಬೇರೆಯಾಗುತ್ತಿತ್ತು.

ವಿಶ್ವ ವಿದ್ಯಾಲಯಗಳಲ್ಲಿ ವಿಜ್ಞಾನ-ಮಾನವೀಯಕಗಳು ಮತ್ತು ಧರ್ಮ ಸರಿಯಾಗಿ ಕಲಿಸಲ್ಪಡಬೇಕು. ಸಂಯೋಜನಾತ್ಮಕ ಸಂಬಂಧ ಬರಬೇಕು. ಡಾ. ರಾಧಾಕೃಷ್ಣನ್ ಹೇಳುತ್ತಾರೆ. 'I hope that in univirsities three things, sciences, humanities and religion, are worked together as parts of one whole. Human knowledge can not be divided against itself'.[೯೯]

---

೯೯. True knowledge p.55

ನಮ್ಮ ವಿದ್ಯಾರ್ಥಿಗಳನ್ನು ಯಾವ ರೀತಿ ತರಬೇತಿಗೊಳಿಸಬೇಕು ಎಂಬುದರ ಬಗ್ಗೆ ಹೇಳುತ್ತಾರೆ. 'The students should be trained to struggle agaisnt injustice, oppression and fear[೧೦೦] ಅಂದರೆ ನಮ್ಮ ವಿದ್ಯಾರ್ಥಿಗಳಿಗೆ ಅಜ್ಞಾನ, ಅನ್ಯಾಯ, ಹಿಂಸೆಯ ದಬ್ಬಾಳಿಕೆ ಮತ್ತು ಭಯಭೀತಿಗಳ ವಿರುದ್ಧ ಹೋರಾಟ ನಡೆಸುವಂತಹ ತರಬೇತಿಯನ್ನು ಅವರಿಗೆ ನೀಡಬೇಕು ಎಂದು ಡಾ. ರಾಧಾಕೃಷ್ಣನ್ ಹೇಳುತ್ತಾರೆ ಹಾಗೂ 'A University must stand for the persuit of truth and goodness. Intellectual integrity has been the fundamental principle of human life. These are the two qualities which mark out a univeristy'.[೧೦೧]

ಅಂದರೆ ವಿಶ್ವದ್ಯಾಲಯವು ಸತ್ಯ ಮತ್ತು ಒಳ್ಳೆಯತನಗಳ ದೃಢ ನಂಬಿಕೆಯ ಮೇಲೆ ನಿಂತಿರಬೇಕು. ಬೌದ್ಧಿಕ ಋಜುತ್ವ (ಪ್ರಾಮಾಣಿಕತೆ)ವು ಮಾನವ ಜೀವನದ ಮೂಲಭೂತ ಮುಖ್ಯಸ್ಥವಾಗಬೇಕು. ಈ ಎರಡು ಗುಣಗಳಿಂದಲೇ ವಿಶ್ವವಿದ್ಯಾಲಯವನ್ನು ಗುರುತಿಸಬಹುದು ಎಂದು ಡಾ. ರಾಧಾಕೃಷ್ಣನ್‌ರು ತಿಳಿಯಪಡಿಸುತ್ತಾರೆ.

'ಭಾರತ ಧರ್ಮ-ತತ್ತ್ವಜ್ಞಾನದ ದೇಶ' ಎಂದು ಒಣ ಜಂಭ ಕೊಚ್ಚಿಕೊಳ್ಳುತ್ತಿದ್ದೇವೆ. ಈ ದೇಶದಲ್ಲಿ ಧರ್ಮ-ದರ್ಶನ-ತತ್ತ್ವಜ್ಞಾನ ಎಲ್ಲಿದೆ? ಮೂಢನಂಬಿಕೆ-ಕಂದಾಚಾರ-ಅಂಧಶ್ರದ್ಧೆ ಒಂದೆಡೆ; ಹಿಂಸೆ-ಕ್ರೌರ್ಯ-ಲಂಚ-ಭ್ರಷ್ಟಾಚಾರ-ಸ್ವಾರ್ಥ-ಅಧಿಕಾರ ದಾಹ ಇನ್ನೊಂದೆಡೆ. ಈ ಎರಡರ ನಡುವೆ ಮಾನವೀಯತೆ ನರಳುತ್ತಿದೆ. ಧರ್ಮ ಕುಸಿಯುತ್ತಿದೆ, ತತ್ತ್ವಜ್ಞಾನ ಕುತ್ತುಸಿರು ಬಿಡುತ್ತಿರುವ ಪರಿಸ್ಥಿತಿ ಉಂಟಾಗಿದೆ. ಒಂದು ಕಾಲಕ್ಕೆ 'Philosophy is the mother of all sciences' ಎಲ್ಲ ಜ್ಞಾನ ವಿಜ್ಞಾನಗಳ ತಾಯಿ ತತ್ತ್ವಜ್ಞಾನ ಎಂದು ಹೇಳಲಾಗುತ್ತಿತ್ತು. ಇಂದು ನಮ್ಮ ಶಾಲೆ-ಕಾಲೇಜು ವಿಶ್ವವಿದ್ಯಾಲಯಗಳಲ್ಲಿ ತತ್ತ್ವಜ್ಞಾನಕ್ಕೆ ಎಷ್ಟೊಂದು ಮಹತ್ವ ನೀಡಲಾಗುತ್ತಿದೆ?

ಯಾವುದು ವಿದ್ಯಾರ್ಥಿಗಳ ಬಾಳನ್ನು ತಾತ್ವಿಕ-ಧಾರ್ಮಿಕ-ಮಾನವೀಯ ತಳಹದಿಯ ಮೇಲೆ ರೂಪಿಸಬೇಕಿತ್ತೋ ಅದನ್ನೇ ಉದಾಸೀನ ಮಾಡಿ ವಿಕೃತ ಭೋಗ ಜೀವನದ ನೈತಿಕ ಅಧಃಪತನದ ಪೀಳಿಗೆಯು ನಿರ್ಮಾಣವಾಗುತ್ತಿರುವ ವ್ಯವಸ್ಥೆಯು ತಾಂಡವವಾಡುತ್ತಿದೆ. ಇನ್ನು ಕೆಲವರು ಕೇವಲ ನೀತಿಯಿದ್ದರೆ ಸಾಕು ಧರ್ಮ-ದೇವರು-ಆಧ್ಯಾತ್ಮ ಬೇಕಿಲ್ಲ ಎಂಬ ವಾದವನ್ನು ಹೂಡುತ್ತಿರುವರು. ಇದೆಂತು ಸಾಧ್ಯ?

---

೧೦೦. The Creative Life, p. 53

೧೦೧. Speeches and wriotings Vol. II, p. 152

ಮಾನವನ ಬದುಕು ಬಿಡಿ ಬಿಡಿಯಾಗಿಲ್ಲ, ಅದು ಇಡಿಯಾಗಿದೆ. ಆದರಂತೆ ನೀತಿ-ಧರ್ಮ-ಆಧ್ಯಾತ್ಮ-ಬದುಕು ಇವೆಲ್ಲ ಬಿಚ್ಚಿ ಬೇರೆ ಮಾಡಲಾಗದ ಅವಿನಾಭಾವ ಸಂಬಂಧವುಳ್ಳವುಗಳಾಗಿವೆ. ಇನ್ನೂ ಕೆಲವು ಗುರುಗಳು (ಎಲ್ಲ ರಂಗಗಳ ಮಾರ್ಗದರ್ಶಕರು, ನೇತಾರರು) ನಮ್ಮ ಖಾಸಗಿ ಬದುಕು ನೋಡಬೇಡಿರಿ ಅದನ್ನು ತಕ್ಕೊಂಡು ನಿಮಗೇನು ಮಾಡಬೇಕಿದೆ/ ನಾವು ಏನು ಕಲಿಸ್ತೇವೆ-ಹೇಳ್ತೇವೆ ಅಷ್ಟೇ ನೋಡಿರಿ ಎನ್ನುವ ಧಾರ್ಷ್ಟ್ಯತನದ ಬೊಗಳೆ ಕೊಚ್ಚಿಕೊಳ್ಳುತ್ತಾರೆ. ಅದರರ್ಥ 'ನಾನು ಹಾದರ ಮಾಡಿದರೂ ಚಿಂತೆಯಿಲ್ಲ, ನನ್ನ ಬಾಯಿಂದ ಪಾತಿವ್ರತ್ಯದ ಪಾಠ ಕಲಿಯಿರಿ' ಎಂಬಂತೆ !

ನೂಲಿನಂತೆ ಸೀರೆ, ತಾಯಿಯಂತೆ ಮಗಳು, ಬಿತ್ತಿದಂತೆ ಬೆಳೆ, ತಂದೆಯಂತೆ ಮಗ, ಗುರುವಿನಂತೆ ಶಿಷ್ಯ ಎಂಬ ಸರಳ ವಿಚಾರವೂ ಇಂಥವರ ಅರಿವಿಗೆ ಬರುವುದಿಲ್ಲ. ಒಬ್ಬ ಶಿಕ್ಷಕ ಏನು ಕಲಿಸುತ್ತಾನೆ ಅಷ್ಟೇ ಮಹತ್ವವಿಲ್ಲ. ಅದರೊಂದಿಗೆ ಆತ ಹೇಗಿದ್ದಾನೆ ಎಂಬುದು ಅಷ್ಟೇ ಮಹತ್ವದ್ದಾಗಿದೆ. ಅದರ ಜೊತೆಗೆ ಸುತ್ತಣ ಪರಿಸರವೂ ಕೂಡ ಪರಿಣಾಮ ಬೀರುತ್ತದೆ.

ಈ ಒಳ ಅರಿವನ್ನು ಹೊಂದಿದ ಶಿಕ್ಷಕ ವಿದ್ಯಾರ್ಥಿಗಳನ್ನು ನಿರ್ಮಾಣ ಮಾಡಬಲ್ಲ. ರಾಷ್ಟ್ರದ ಭವಿತವ್ಯ ರೂಪಿಸಬಲ್ಲ. ಶಿಕ್ಷಕರೊಳಗಿನ ಬೆಳಕು ಈ ಕಾರ್ಯವನ್ನು, ಈ ಬದಲಾವಣೆಯನ್ನು ತರಬಲ್ಲುದು ಎಂದು ಡಾ. ರಾಧಾಕೃಷ್ಣನ್ ಹೇಳುತ್ತಾರೆ. 'The light within us gives us the hope that it is possible for us to change.'[೧೦೨]

ಡಾ. ರಾಧಾಕೃಷ್ಣನ್‌ರು ನಮ್ಮ ದೇಶದ ಜ್ಞಾನ ವಿಜ್ಞಾನ ಸಂಸ್ಕೃತಿಯ ಬೆಳಕನ್ನು ಹೊಸ ಪೀಳಿಗೆಗೆ ನೀಡಿದ ಮಹಾನ್ ಗುರು-ತತ್ತ್ವಜ್ಞಾನಿಯಾಗಿ, ಶಿಕ್ಷಕ ಸಮುದಾಯಕ್ಕೆಲ್ಲ ಗೌರವ ತಂದುಕೊಟ್ಟ. ಆ ವೃತ್ತಿಯ ಪಾವಿತ್ರ್ಯವನ್ನು ಎತ್ತಿ ತೋರಿದ ಮಹಾಮಾನವರಾಗಿದ್ದಾರೆ. ಶಿಕ್ಷಕರು ಕೇವಲ ಅವರ ನೆನಹಿನಲ್ಲಿ 'ದಿನಾಚರಣೆ' ಮಾಡಿದರೆ ಸಾಲದು. ಅವರ ವಿಚಾರಗಳನ್ನು ತಮ್ಮ ಬಾಳಿನಲ್ಲಿ ಅಳವಡಿಸಿಕೊಂಡು ಚಾರಿತ್ರ್ಯವಂತರಾಗಿ, ಚಾರಿತ್ರ್ಯ ನಿರ್ಮಾಣದ ಮಹಾಮಣಿಹದಲ್ಲಿ ಪಾಲ್ಗೊಳ್ಳುವ ದೃಢಸಂಕಲ್ಪ ಮಾಡಿ, ಕಾರ್ಯೋನ್ಮುಖರಾಗಬೇಕು. ಅಂದಾಗ ಮಾತ್ರ ಶತಮಾನೋತ್ಸವ ಆಚರಣೆ ಸಾರ್ಥಕವಾದೀತು.

---

೧೦೨. The creative Life p. 140

ಶಿಕ್ಷಕ ಇಂದು ಕೆಲವು ಸಲ ಶಿಕ್ಷೆಯಾಗಿಯೇ ಪರಿಣಮಿಸಿದ್ದಾನೆ. ವಿದ್ಯಾರ್ಥಿಗಳಿಗೆ ಪ್ರಾಥಮಿಕ ಮತ್ತು ಉನ್ನತ ಹಂತಗಳಲ್ಲಿ ಶಿಕ್ಷಕರೆಂದರೆ ಗೌರವಕ್ಕಿಂತ ಭೀತಿಯೇ ಹೆಚ್ಚು. ಪ್ರಾಥಮಿಕ ಹಂತದಲ್ಲಿ ಹೊಡೆತ-ಬಡೆತಗಳ, ಸಿಟ್ಟು ಬೈಗುಳಗಳಿಂದ ಶಿಕ್ಷೆಯಾಗಿದ್ದರೆ. ಉನ್ನತ ಹಂತಗಳಲ್ಲಿ ಫಸ್ಟ ಕ್ಲಾಸ್-ಸೆಕೆಂಡ್‌ಕ್ಲಾಸ್ ಪಾಸು ಮಾಡುವನೋ ಇಲ್ಲವೋ ಎಂಬ ಭಯ. ಇದು ಸಾರ್ವತ್ರಿಕವಾಗಿಯಲ್ಲದಿದ್ದರೂ ಅಲ್ಲಲ್ಲಿ ಕಂಡುಬರುವ ಚಿತ್ರದೃಶ್ಯ. ಇದು ದೂರಾಗಬೇಕಾದರೆ 'Love of the pupils is the first essential quality of a successful teacher.'[೧೦೩] ಅಂದರೆ ವಿದ್ಯಾರ್ಥಿಗಳನ್ನು ಮುಕ್ತ ಮನಸ್ಸಿನಿಂದ ತೆರೆದ ಹೃದಯದಿಂದ ಪ್ರೀತಿಸಬೇಕು. ವಾತ್ಸಲ್ಯ ತೋರಬೇಕು.

ಇತ್ತೀಚೆಗಿನ ಇನ್ನೊಂದು ವಿಚಿತ್ರವಾದ ಬೆಳವಣಿಗೆಯೆಂದರೆ ಶಾಲೆಗಳು ಜೈಲು ಎಂಬ ಭಾವನೆ. ಅಕಸ್ಮಾತ್ ಯಾರೋ ಪ್ರಖ್ಯಾತ ಮಹನೀಯರು, ಆಯಾ ಶಿಕ್ಷಣ ಸಂಸ್ಥೆಯ ಮುಖಂಡರು, ದೇಶದ ನೇತಾರರು ಮರಣ ಹೊಂದಿದರೆ, ಶಾಲೆಗಳಿಗೆ ರಜೆ ಘೋಷಿಸಲಾಗುತ್ತದೆ. ಆಗ ವಿದ್ಯಾರ್ಥಿಗಳು ಒಳ್ಳೆಯ ಖುಷಿಯಿಂದ ಹಾರಾಡುವುದು, ನೆಗೆದಾಡುವುದು, ಸೂಟಿ ಬಿಟ್ಟಿತೆಂದು ಕುಣಿದಾಡುವುದು ಕಂಡಾಗ, ಅವರಿಗೆ ಶಾಲೆಯೆಂಬ ಜೇಲಿನಿಂದ ಬಿಡುಗಡೆ ಹೊಂದಿ ಸ್ವಾತಂತ್ರ್ಯದ ಸ್ವಚ್ಛಂದ ಗಾಳಿ ಉಸಿರಾಡುತ್ತಿದ್ದೇವೆಂಬ ಭಾವನೆಯುಂಟಾಗುತ್ತಿದೆ. ಈ ಭಾವನೆ ದೂರ ಮಾಡುವ ಹೊಣೆ ಶಿಕ್ಷಕರ ಮೇಲಿದೆ.

**ಶಿಕ್ಷಕ ತಾನೂ ಸತತಾಭ್ಯಾಸಿಯಾಗಿರಬೇಕು.** ಬಹಳಷ್ಟು ಜನ ಪ್ರಾಧ್ಯಾಪಕರು ತಾವು ವಿದ್ಯಾರ್ಥಿಗಳಾಗಿದ್ದಾಗ ಬರೆದಿಟ್ಟುಕೊಂಡಿದ್ದ ಹಳೆಯ ಟಿಪ್ಪಣಿ (ನೋಟ್ಸ್)ಗಳನ್ನೇ ತಾವು ನಿವೃತ್ತಿಯಾಗುವವರೆಗೂ ಬೋಧಿ ಸುವುದನ್ನು ಕಾಣುತ್ತೇವೆ. ಶಿಕ್ಷಕನಾದ ನಂತರ ತನ್ನ ಓದು -ಅಧ್ಯಯನ ಮುಗಿಯಿತೆಂಬ ಭಾವನೆ, ಇದು ದೂರಾಗಬೇಕು. ನಿಜವಾದ ಜ್ಞಾನಾರ್ಜನೆ ವಿದ್ಯಾ-ಪದವಿ ಪಡೆದ ನಂತರವೇ ಪ್ರಾರಂಭವಾಗುತ್ತದೆ ಎಂಬುದನ್ನು ಅರಿತುಕೊಳ್ಳಬೇಕು. ಜ್ಞಾನದ ಕ್ಷಿತಿಜ ವಿಶಾಲವಾಗಿದೆ. ಅನಂತವಾಗಿದೆ; ಹೊಸ ಹೊಸ ಸಂಶೋಧನೆ ಬೆಳವಣಿಗೆಗಳು ಆಗುತ್ತಲೇ ಇರುತ್ತವೆ. ಕಾರಣ ಶಿಕ್ಷಕರು ಯಾವ ವೃತ್ತಿಗಾಗಿ ಸಂಬಳ ಪಡೆದು ಅನ್ನ ಉಣ್ಣುವರೋ ಆ ಅನ್ನದ ಋಣಕ್ಕಾದರೂ ಅವರು ಕೃತಜ್ಞರಾಗಿರಬೇಕಾಗುತ್ತದೆ. ಶಿಕ್ಷಕ ತನ್ನ ಶಾಲೆಯ ಕರ್ತವ್ಯದೊಂದಿಗೆ ಕುಟುಂಬ-ಸಮಾಜ-ರಾಷ್ಟ್ರದ ಏಳಿಗೆಗಾಗಿಯೂ ಗಮನವೀಯಬೇಕು. ಸಮಾಜದ ಹಲವಾರು ದೋಷಗಳನ್ನು ನಿವಾರಿಸಲು ಕಾರ್ಯಗೈಯಬೇಕು.

---

೧೦೩. True knowledge p. 34

ಶಿಕ್ಷಕ ಪಠ್ಯಪುಸ್ತಕಗಳ ಜತೆಗೆ ಉತ್ತಮೋತ್ತಮ ಮೌಲ್ಯಗಳನ್ನೊಳಗೊಂಡ ಜ್ಞಾನ-ವಿಜ್ಞಾನ, ಧರ್ಮ-ತತ್ತ್ವಜ್ಞಾನ, ಸಾಹಿತ್ಯ-ಸಂಸ್ಕೃತಿ-ಕಾವ್ಯ-ಕಲೆಗಳ, ನೀತಿ-ಧರ್ಮಗಳ ಗ್ರಂಥಗಳನ್ನು ತನ್ನ ಬಿಡುವಿನ ವೇಳೆಯಲ್ಲಿ ಓದುತ್ತಿರಬೇಕು. ವಿದ್ಯಾರ್ಥಿಗಳಿಗೂ ಆ ದಿಸೆಯಲ್ಲಿ ಪ್ರೇರಣೆ ನೀಡುತ್ತಿರಬೇಕು.

ಗ್ರಂಥಾಲಯಗಳಲ್ಲಿ ವಿಶ್ವದ ಜ್ಞಾನವೆಲ್ಲ ಶೇಖರಗೊಂಡು ಕುಳಿತಿದೆ. ಇಂದು ಸಹಸ್ರಾರು-ಲಕ್ಷಾವಧಿ ಗ್ರಂಥಗಳು ಓದುಗರಿಲ್ಲದೇ ಧೂಳಿನಿಂದ ಕೊಳೆಯಾಗಿ, ಹುಳು-ಗೆದ್ದಲುಗಳಿಗೆ ಆಹಾರವಾಗುತ್ತಿವೆ. ಓದಿನ ಆಸಕ್ತಿ ಕಡಿಮೆಯಾಗುತ್ತಿದೆ. ಭೋಗದ ವಿಷಯಾಸಕ್ತಿ ಹೆಚ್ಚಾಗುತ್ತಿದೆ. ಇದೇ ಪರಿಸ್ಥಿತಿ ಹೀಗೆಯೇ ಮುಂದುವರೆದರೆ ಶಿಲಾಯುಗದ ಕರಾಳ ಕಾಳರಾತ್ರಿಯ ದಿನಗಳು ಹತ್ತಿರವಾಗುವುದರಲ್ಲಿ ಯಾವ ಸಂಶಯವೂ ಉಳಿಯಲಾರದು. ಈಗ ಪ್ರಜ್ಞಾವಂತ ಶಿಕ್ಷಕರು ಸ್ವಾಮಿ ವಿವೇಕಾನಂದರು ಎಚ್ಚರಿಸುವಂತೆ 'Awake Arise Stop not, till the goal is reached.' ಅಂದರೆ ಎಚ್ಚರಾಗಿರಿ,ಏಳಿರಿ ಗುರಿ ಮುಟ್ಟುವವರೆಗೂ ನಿಲ್ಲದಿರಿ ಎಂಬುದನ್ನು ಅರಿಯಬೇಕು.

ಉನ್ನತ ಆಧ್ಯಾತ್ಮಿಕ ಮೌಲ್ಯಗಳ, ಜೀವನ ಮೌಲ್ಯಗಳ ಸಾಧನೆಯ ಇಡೀ ಮಾನವಕುಲ ಕಲ್ಯಾಣದ, ಸರ್ವಾಂಗೀಣ ಉನ್ನತಿಯ ಗುರಿ ಸಾಧಿಸುವವರೆಗೆ ಪ್ರಜ್ಞಾವಂತರು ಕಾರ್ಯಗೈಯುತ್ತಲೇ ಇರಬೇಕಾಗುತ್ತದೆ. ಇದು ಒಣ ಆದರ್ಶದ ಮಾತೆಂದು ಮೂಗು ಮುರಿಯಬೇಕಾಗಿಲ್ಲ, ಅಸಾಧ್ಯವೆಂದು ಕೈಚೆಲ್ಲಿ ನಿರಾಶರಾಗಿ ಕುಳಿತುಕೊಳ್ಳಬೇಕಾಗಿಲ್ಲ. ಈಗ ನಾವಿಡುವ ಒಂದು ಹೆಜ್ಜೆಯೂ ಗುರಿಯತ್ತ ಒಯ್ಯುತ್ತದೆ. 'A single step leads you nearer to the goal' ಎಂಬ ಜ್ಞಾನಿಗಳ ಮಾತು ನೆನಪಿನಲ್ಲಿಡಬೇಕು. ಡಾ. ರಾಧಾಕೃಷ್ಣನ್‌ರು ಆದರ್ಶವಾದಿ ತತ್ತ್ವಜ್ಞಾನಿಗಳಾಗಿದ್ದರು. ತಮ್ಮ ಬಾಳಿನಲ್ಲಿ ಸಾಧಿಸಿದ ಆದರ್ಶವನ್ನೇ ನಮಗಾಗಿ ತೆರೆದಿಟ್ಟಿದ್ದಾರೆ. ಅದು ಮಾನವಕುಲದ ಸಹಸ್ರ ಸಹಸ್ರ ವರುಷಗಳ ಅನುಭಾವಿ-ದಾರ್ಶನಿಕರ ಬಾಳಿನಲ್ಲಿ ಬುತ್ತಿ-ಬೆಳಕು. ಜೀವನದ ಅಂಧಕಾರಮಯ ಕತ್ತಲೆಯ ಕಾಳರಾತ್ರಿಯಲ್ಲಿಯೇ ಡಾ. ರಾಧಾಕೃಷ್ಣನ್‌ರಂತಹ ಬೆಳಕಿನ ಕಿರಣಗಳು ಮಾರ್ಗ ತೋರುತ್ತವೆ. ಶಿಕ್ಷಕರು ಈ ನಿಟ್ಟಿನಲ್ಲಿ ಕಾರ್ಯಗೈಯುವ ಪ್ರಾಮಾಣಿಕ ಯತ್ನಕ್ಕೆ ತೊಡಗಬೇಕಿದೆ.

ಬಹಳಷ್ಟು ಶಿಕ್ಷಕರು ನಾವಿಂದು ನಮಗೆ ದೊರೆಯಬಹುದಾದ ಸೌಲಭ್ಯಗಳಿಗಾಗಿ ಬಹಳಷ್ಟು ಗಮನಹರಿಸುತ್ತೇವೆ, ಅದರ ಜೊತೆಗೆ ನಮ್ಮ ಕರ್ತವ್ಯ ಕುರಿತೂ ಗಮನಹರಿಸಬೇಕಲ್ಲವೆ? ಇದು ನಮ್ಮ ನೈತಿಕ ಜವಾಬ್ದಾರಿಯಲ್ಲವೆ? ವಿಮರ್ಶೆ ಮಾಡಿಕೊಳ್ಳಬೇಕಿದೆ.

ಇನ್ನು ವಿದ್ಯಾರ್ಥಿಗಳು ತಮ್ಮದೇನೂ ಜವಾಬ್ದಾರಿ ಇಲ್ಲವೆಂದು ಹೊಣೆಗಾರಿಕೆ ಹಾರಿಸಿಕೊಳ್ಳಲಾಗದು. ಹಲವಾರು ಸಂಘ-ಸಂಸ್ಥೆಗಳನ್ನು ಕಟ್ಟಿಕೊಂಡು, ಒಂದಿಲ್ಲೊಂದು ರಾಜಕೀಯ ಪಕ್ಷಗಳ ಧೂರ್ತ ರಾಜಕಾರಣಿಗಳ ಬಾಲ ಬಡಕರಾಗದೇ ಇಡೀ ವಿದ್ಯಾರ್ಥಿ ಸಮುದಾಯಕ್ಕೆ ಈ ಸಮುದಾಯಗಳ ಏಳಿಗೆಗೆ ಕಾರಣವಾಗುವಂತಹ ಸಂಘಟನೆಗಳು ಬೆಳೆಯಬೇಕು. ರಾಜಕಾರಣಿಗಳು ತಮ್ಮ ಸ್ವಾರ್ಥಕ್ಕಾಗಿ ಅಧಿಕಾರ ಲಾಲಸೆಗಾಗಿ ಪುಕ್ಕಟೆಯಾಗಿ ಲಭ್ಯವಿರುವ ವಿದ್ಯಾರ್ಥಿ-ಯುವಶಕ್ತಿಯನ್ನು ದುರುಪಯೋಗಪಡಿಸಿಕೊಂಡು ವಿದ್ಯಾರ್ಥಿಗಳ ಬಾಳನ್ನೇ ಹಾಳು ಮಾಡುತ್ತಿರುವುದೂ ಕಟು ಸತ್ಯವಾಗಿದೆ. ಜಾತಿ-ಕುಲ-ಧರ್ಮ-ಮತಗಳ, ಭಾಷೆ-ಗಡಿಗಳ ಗೊಂದಲಕ್ಕೆ ಸಿಲುಕಿ ಅಲ್ಲಲ್ಲಿ ರಾಷ್ಟ್ರೀಯ ಏಕತೆಗೆ ಧಕ್ಕೆ ತರುವ ಕೆಲವು ಗೂಂಡಾಗಳ ಕುತಂತ್ರಕ್ಕೆ ವಿದ್ಯಾರ್ಥಿಗಳು ಎಂದೂ ಬಲಿಯಾಗದಂತೆ ಎಚ್ಚರವಹಿಸಬೇಕು.

ಸ್ವತಃ ನನ್ನ ವಿದ್ಯಾರ್ಥಿ ಜೀವನದ ಅನುಭವ ಹೇಳುವುದಾದರೆ, ವಿಜಾಪುರದ ಕೆ.ಸಿ.ಪಿ. ಸೈನ್ಸ್ ಕಾಲೇಜಿನಲ್ಲಿ ಕಲಿಯುತ್ತಿದ್ದಾಗ (೧೯೬೭ ರಿಂದ ೧೯೭೨ರ ಅವಧಿಯಲ್ಲಿ) ನಮ್ಮ ದೇಶದ ರಾಜಕೀಯದಲ್ಲಿ ರಾಜಕೀಯ ಪಕ್ಷಗಳ ಒಡಕು-ತಿಕ್ಕಾಟ, ಭ್ರಷ್ಟತೆಗಳಿಂದ, ಅಧಿಕಾರ ಲಾಲಸೆಗಾಗಿ ಬಹಳಷ್ಟು ಹೋರಾಟವಿದ್ದ ಕಾಲ. ವಿದ್ಯಾರ್ಥಿಗಳ ಸಂಘಟನೆಗಳನ್ನು, ಶಕ್ತಿಗಳನ್ನು ಬಳಸಿಕೊಂಡು ಅಧಿಕಾರ ಪಡೆಯಬೇಕೆಂಬ ತಿಕ್ಕಾಟ, ಚಳುವಳಿ, ಲಾಠಿ ಚಾರ್ಜ, ಅಶ್ರುವಾಯು ಮುಂತಾದವು ನಡೆದು, ವಿದ್ಯಾರ್ಥಿಗಳ ಬಂಧನ, ಹಲವಾರು ಜನ ವಿದ್ಯಾರ್ಥಿಗಳು ನಂತರ ಕೋರ್ಟಿಗೆ ಅಲೆದಾಟ, ವಿದ್ಯಾಭ್ಯಾಸ ಹಾಳಾದುದನ್ನು ಕಂಡಿದ್ದೇನೆ. ಜ್ಞಾನಪಿಪಾಸು ಹಲವಾರು (ಸುಮಾರು ಎಂಭತ್ತು) ವಿದ್ಯಾರ್ಥಿಗಳು **ಜ್ಞಾನಯೋಗಾಶ್ರಮದ ತತ್ವಜ್ಞಾನಿ ಶ್ರೀ ಸಿದ್ಧೇಶ್ವರ ಸ್ವಾಮೀಜಿಯವರ** ಯೋಗ್ಯ ಮಾರ್ಗದರ್ಶನದಲ್ಲಿ ಅಂದರೆ **'ಜಿಜ್ಞಾಸು ಸಂಘ'** Free Thinkers Association ಎಂಬ ಸಂಘಟನೆ ಕಟ್ಟಿಕೊಂಡಿದ್ದೆವು. ಪ್ರತಿ ಭಾನುವಾರಕ್ಕೊಮ್ಮೆ ಊರ ಹೊರಗೆ ಕರಡಿ ತೋಟದ ಆಶ್ರಮದಲ್ಲಿ ಸಂಜೆ ೩ ಗಂಟೆಯಿಂದ ೬ ಗಂಟೆಯವರೆಗೆ ವಿಶ್ವದ ಜ್ಞಾನ-ವಿಜ್ಞಾನಗಳ, ಭಾಷೆ-ಕಲೆಗಳ, ಧರ್ಮ ತತ್ವಗಳ, ನೀತಿ-ನಡತೆಗಳ, ಆಗು-ಹೋಗುಗಳ ಚಿಂತನ-ಚರ್ಚೆ ನಡೆಸುತ್ತಿದ್ದೆವು. ಪೂಜ್ಯರು ಜಾಗತಿಕ ಧರ್ಮಗಳ ನೀತಿ, ಜಾಗತಿಕ ಮಹಾಪುರುಷರ, ತತ್ವವೇತ್ತರ, ಶರಣರ, ಸಂತರ, ಸತ್ಯಶೋಧಕರ ವಿಚಾರ ತಿಳಿಸುತ್ತಿದ್ದರು. ಈ ನಾಲ್ಕು ವರ್ಷಗಳ ಜ್ಞಾನವೇ ಇಂದಣ ನನ್ನ ಸಾಧನೆಯ ಬರಹ. ಲೇಖನ ಕವನ, ಗ್ರಂಥ ರಚನೆ, ಉಪನ್ಯಾಸ, ಭಾಷಣಗಳಿಗೆ ಸಾತ್ವಿಕ ಅಧ್ಯಾತ್ಮಿಕ ಜೀವನಕ್ಕೆ ಪ್ರಾಧ್ಯಾಪಕ ವೃತ್ತಿಗೆ ಅಡಿಪಾಯವಾಗಿದೆ.

ಇಲ್ಲಿ ನನ್ನ ಕುರಿತು ನಾನೇ ಹೇಳಿಕೊಳ್ಳುತ್ತಿರುವೆ ಎಂದು ಯಾರೂ ಭಾವಿಸಬೇಕಾಗಿಲ್ಲ. ನಮ್ಮ ವಿದ್ಯಾರ್ಥಿ ಸಮುದಾಯ ಎಲ್ಲಿ ತಪ್ಪುತ್ತಿದೆ? ಎಲ್ಲಿ ಎಚ್ಚರಾಗಬೇಕಿದೆ? ಯಾವ ಮಾರ್ಗ ಅನುಸರಿಸಬೇಕಿದೆ ?ನಮ್ಮ ಅನುಭವಗಳು ಯೋಗ್ಯವೆನಿಸಿದರೆ ಸ್ವೀಕರಿಸಬಹುದೆಂಬ ಪ್ರಾಮಾಣಿಕ ವಿನಮ್ರ ವಿಜ್ಞಾಪನೆ ಮಾಡುವ ಉದ್ದೇಶ ನನ್ನದು.

ಡಾ. ರಾಧಾಕೃಷ್ಣನ್‌ರು ವಿದ್ಯಾರ್ಥಿಗಳಿಗೆ ಸಲಹೆ ಮಾಡುತ್ತಾರೆ. 'My advice to the young men and women : Mother India expect of you that your lives should be clean, nobel and dedicated to selfless work.'[೧೦೪] ಅಂದರೆ ಯುವಕ-ಯುವತಿಯರೆ, ನಿಮಗೆ ನನ್ನ ಒಂದು ಸಲಹೆ ಎಂದರೆ ತಾಯಿ ಭಾರತಿಯು ನಿಮ್ಮ ಜೀವನಗಳು ಸ್ವಚ್ಛ, ಉದಾತ್ತಶೀಲ ಸ್ವಭಾವಗಳ ಮತ್ತು ನಿಸ್ವಾರ್ಥ ಕಾರ್ಯಕ್ಕೆ ಅರ್ಪಣೆಯಾಗಿರಬೇಕೆಂದು ಇಚ್ಛಿಸುತ್ತಾಳೆ'ಎಂದು ತಿಳಿಸುತ್ತಾರೆ.

ನಮ್ಮ ವಿದ್ಯಾರ್ಥಿಗಳು ದಯವಿಟ್ಟು ಡಾ. ರಾಧಾಕೃಷ್ಣನ್‌ರ ಈ ಸಲಹೆಯನ್ನು ಗಮನದಲ್ಲಿಟ್ಟುಕೊಳ್ಳಬೇಕು. ನಾಳೆ ನೀವೇ ನಮ್ಮ ದೇಶದ ನಾಯಕರು, ನಾಗರಿಕರು. ಭವಿಷತ್ ಭಾರತದ ರೂವಾರಿಗಳಾಗುವವರು. ತನು-ಮನ-ಭಾವಗಳಶುದ್ಧಿ ಮತ್ತು ಉದಾತ್ತ ಶೀಲ-ಸ್ವಭಾವಗಳ ಗಳಿಕೆ ಬಹಳ ಮಹತ್ವದ್ದಾಗಿದೆ. ವಿದ್ಯಾರ್ಥಿ ಜೀವನದಲ್ಲಿ ಕಾಲೇಜು ಅವಧಿ ಬಹು ಮಹತ್ವದ್ದು. ಈ ನಾಲ್ಕೈದು ವರ್ಷ ಏನು ಬುತ್ತಿ ಕಟ್ಟಿಕೊಳ್ಳುವಿರೋ ಅದನ್ನೇ ಜೀವನ ಪರ್ಯಂತರ ಉಣ್ಣುವಿರಿ. ಜ್ಞಾನದ ಬುತ್ತಿ ಎಂದೂ ಕಡಿಮೆಯಾಗುವುದಿಲ್ಲ. ಉಂಡಷ್ಟೂ ಹೆಚ್ಚಾಗುತ್ತದೆ. 'ಶೀಲ'ಬಹು ಮಹತ್ವದ್ದು. 'If wealth is lost, Nothing is lost; If health is lost; something is lost; If Charecter is lost, Everything is lost' ಎಂಬ ಜ್ಞಾನಿಗಳ ಮಾತು ಅರಿತುಕೊಳ್ಳಬೇಕು.

ತನು-ಮನಗಳ ವಿಕಾರ -ಚಂಚಲತೆಗೆ ಹಾಳಾಗಲು ಬೇಕಾಗಿರುವ ಪರಿಸರ, ವಾತಾವರಣ, ಆಧುನಿಕ ಸೌಲಭ್ಯಗಳ ಕೊರತೆಗೇನೂ ಆತಂಕವಿಲ್ಲದಂತಾಗಿದೆ. ಇಂದು ಕಾಮ-ಪ್ರೇಮಗಳ ಮಾನಸಿಕ ಹೊಯ್ದಾಟ, ಹಲವಾರು ಚಲನಚಿತ್ರಗಳಲ್ಲಿಯ ಅಶ್ಲೀಲ ಅತ್ಯಾಚಾರ-ಅನಾಚಾರಗಳು ವಿದ್ಯಾರ್ಥಿಗಳ ಭಾವ-ಬುದ್ಧಿಗಳನ್ನು ಬಲಿ ತೆಗೆದುಕೊಳ್ಳುತ್ತಿವೆ. ಅಪ್ರಾಪ್ತ ವಯಸ್ಸಿನ ಅಪಕ್ವ ಮನದಂತೆ ಕುಣಿದರೆ ಮುಂದಣ ಜೀವನ ಪರ್ಯಂತರ ಕಣ್ಣೀರಿನಲ್ಲಿಯೇ ಕೈತೊಳೆಯಬೇಕಾಗುತ್ತದೆ.

---

೧೦೪. The Present Crisis of Faith, p. 138

ಬೆಟ್ಟವನ್ನೇರುವುದು ಎಷ್ಟು ಕಷ್ಟವೋ ಮೇಲಿನಿಂದ ಕಂದಕಕ್ಕೆ ಬೀಳುವುದು ಅಷ್ಟೇ ಸುಲಭ. 'ಗಿರಿಶಿಖರ' ಏರಿದ ತೇನಸಿಂಗ ಸಾಧನೆ ತಾವು ಓದಿದ್ದೀರಿ. ದಯವಿಟ್ಟು ಅರ್ಥ ಮಾಡಿಕೊಳ್ಳಿರಿ. **'ಸಾಸಿವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಾ'** ಎಂಬ ಬಸವಾದಿ ಶರಣರ ಅನುಭಾವ ವಾಣಿಯನ್ನು ನೆನಪಿಡಿ. ವಿದ್ಯಾರ್ಥಿ ಜೀವನದಲ್ಲಿ ದುಶ್ಚಟ-ದುರ್ಗುಣ-ದುಷ್ಟ ಸಹವಾಸಗಳಿಗೆ ಬಲಿಯಾಗಿ ಅನಂತರ ಜೀವನ ರಂಗಕ್ಕೆ ಬಂದಾಗ ಕಾಡಿನೊಳಗೆ ಕಣ್ಣು ಕಟ್ಟಿ ಒಯ್ದು ಬಿಟ್ಟಂತಾಗಿ, ಅಲ್ಲಿಯ ಸಮಸ್ಯೆಗಳನ್ನು ಎದುರಿಸುವ ಶಕ್ತಿ-ಸಾಮರ್ಥ್ಯ, ವಿದ್ಯಾ-ಬುದ್ಧಿಗಳಿಲ್ಲದೇ ಜೀವನವೇ ಪತನಗೊಳ್ಳುವಂತಾಗಬಾರದೆಂದು ನಿಮಗಿಚ್ಛೆ ಇದ್ದರೆ ಈಗಲೇ ಎಚ್ಚತ್ತುಕೊಳ್ಳಿ ಡಾ. ರಾಧಾಕೃಷ್ಣನ್‌ರಂತಹ ಹಿರಿಯ ಜ್ಞಾನಿಗಳ ಸಲಹೆ ಪಾಲಿಸಿರೆಂದೂ ವಿದ್ಯಾರ್ಥಿಗಳಲ್ಲಿ ಈ ಮೂಲಕ ಅರಿಕೆ ಮಾಡಿಕೊಳ್ಳುತ್ತಿರುವೆ. ನಮ್ಮ ಬದುಕಿಗೆ ನಾವೇ ಜವಾಬ್ದಾರರು Man is the maker of his own fate. ಎಂಬುದನ್ನು ಅರಿತರೆ, ಅರಿತು ನಡೆದರೆ ಸಾಕು.

**ವಿದ್ಯಾರ್ಥಿ ಜೀವನ ಗರಡಿ ಮನೆಯ ಸಾಧನೆ ಇದ್ದಂತೆ.** ಸಾಧನೆಯ ತರುವಾಯ ಕುಸ್ತಿಯ ಕಣಕ್ಕಿಳಿದು ಸ್ಪರ್ಧಿಸುವಂತೆ, ಬಾಳಿನ ಕಣದಲ್ಲಿ ವಿದ್ಯಾರ್ಥಿ ಜೀವನದ ಸಾಧನೆ ಸಹಾಯಕ್ಕೆ ಬರುವುದು. ಯಾವ ವೃತ್ತಿಯೇ ಕೈಕೊಳ್ಳಿ ಅದು ಸತ್ಯ-ಶುದ್ಧವಾಗಿದ್ದು, ವ್ಯಷ್ಟಿ-ಸಮವೃಷ್ಟಿಯ ಹಿತ ಸಾಧಿಸುವಂತಾದರೆ ಬಾಳು ಸಾರ್ಥಕವಾದೀತು.

**ವಿದ್ಯಾರ್ಥಿ-ಶಿಕ್ಷಕ ಸಂಬಂಧ** ತಂದೆ-ಮಕ್ಕಳ ಸಂಬಂಧಕ್ಕಿಂತ ಮಿಗಿಲಾದದ್ದು. ತನ್ನ ಮಗ ದೊಡ್ಡವನಾಗಿ ಮುಪ್ಪಿನ ಕಾಲದಲ್ಲಿ ಸಹಾಯವಾದಾನು ಎಂಬ ಬಯಕೆ ತಂದೆಗೆ ಇರಬಹುದು ಆದರೆ ಶಿಕ್ಷಕನಿಗೆ ಈ ಯಾವ ಬಯಕೆಯೂ ಇರದೇ, ತನ್ನ ವಿದ್ಯಾರ್ಥಿ ಸುಂಸ್ಕೃತ-ನಾಗರಿಕನಾದರೆ ತನ್ನ ಶ್ರಮ ಸಾರ್ಥಕವಾದಂತೆ ಎಂಬ ಆತ್ಮತೃಪ್ತಿ ಮಾತ್ರ ಇರುತ್ತದೆ. ಡಾ. ರಾಧಾಕೃಷ್ಣನ್‌ರಂತಹ ಶಿಕ್ಷಕರು ಅವರ ವಿದ್ಯಾರ್ಥಿಗಳ ರೂಪದಲ್ಲಿ ವಿಶ್ವದಾದ್ಯಂತ ಹರಿಡಿಕೊಂಡಿದ್ದಾರೆ. ಡಾ. ರಾಧಾಕೃಷ್ಣನ್‌ರಿಗೆ ಯುವಜನತೆಯ ಬಗ್ಗೆ ತುಂಬ ಅಭಿಮಾನ. ಅದಕ್ಕೇನೆ ಅವರು ಹೇಳುತ್ತಾರೆ. 'I have no doubt that young men and women all over this country realize the great possibilities they have of helping humanity forward. They will have a purpose in life and they will be able to look forward to a bright future.[೧೦೫]

---

೧೦೫. True knowledge, p. 8

## ೯. ಡಾ. ರಾಧಾಕೃಷ್ಣನ್‌ರ ಕೌಟುಂಬಿಕ-ಸಾಮಾಜಿಕ ವಿಚಾರಗಳು

ಡಾ. ರಾಧಾಕೃಷ್ಣನ್‌ರು "ಮಾನವನ ಬದುಕು ಮನೆಯಲ್ಲಿಯೇ ರೂಪುಗೊಳ್ಳತೊಡಗಲು ಪ್ರಾರಂಭಿಸುತ್ತದೆ" ಎಂದು ಅರಿತುಕೊಂಡವರು. ಯಾವ ಕುಟುಂಬದಲ್ಲಿ ಸ್ನೇಹ-ಸೌಹಾರ್ದತೆ, ಪ್ರೀತಿ-ವಾತ್ಸಲ್ಯ, ಕಠಿಣ ಪರಿಶ್ರಮಗಳಿರುತ್ತವೆಯೋ ಆ ಕುಟುಂಬ ಆದರ್ಶಮಯವಾಗಿರುತ್ತದೆ. ಮನೆಯು ಕೇವಲ ಕಲ್ಲು ಮಣ್ಣು, ಗಾರೆ ಇಟ್ಟಂಗಿಗಳಿಂದ ಕಟ್ಟಲ್ಪಡಲಾರದು. ಅದು ಆ ಮನೆಯಲ್ಲಿ ವಾಸ ಮಾಡುವ ಜನರ ಹೃದಯಗಳಿಂದ ಭದ್ರವಾಗಿರುತ್ತದೆ.

ಡಾ. ರಾಧಾಕೃಷ್ಣನ್‌ರು ತಿಳಿಸುತ್ತಾರೆ. ಹಲವಾರು ಕಾರಣಗಳಿಂದ ಕುಟುಂಬ ಜೀವನವು ಹದಗೆಟ್ಟಿದೆ. ಶೀಲವನ್ನು ರಕ್ಷಿಸಿಕೊಳ್ಳಬೇಕೆಂಬ ಮನೋವೃತ್ತಿಯು ಮೊದಲಿದ್ದುದಕ್ಕಿಂತ ಕಡಿಮೆಯಾಗುತ್ತ ಬರುತ್ತಿದೆ.[೧೦೬]

ಆಧುನಿಕ ಪರಿಸರದ ಒತ್ತಡದಲ್ಲಿ ಮಾನವನು ತಾಳ್ಮೆ, ಸಹನೆ ಕಳೆದುಕೊಳ್ಳುತ್ತಿದ್ದಾನೆ. ಇದರ ಪರಿಣಾಮ ಆತನ ಕುಟುಂಬ ಜೀವನದ ಮೇಲೆ ಸಹಜವಾಗಿಯೇ ಉಂಟಾಗುತ್ತದೆ. ಹತ್ತಾರು ವರುಷಗಳ ಹಿಂದೆ ಅವಿಭಕ್ತ ಕುಟುಂಬಗಳು ಒಳ್ಳೆಯ ನೀತಿ-ನಡಾವಳಿಯನ್ನಿಟ್ಟುಕೊಂಡು ಬೆಳೆದು ಬರುತ್ತಿದ್ದವು. ಇಂದು ಆಧುನಿಕ ನಾಗರಿಕತೆಯ ಬಿರುಗಾಳಿಯಿಂದಾಗಿ ಈ ನಂಬಿಕೆಗಳು, ವಿಶ್ವಾಸಗಳು ಅಲ್ಲಾಡಿವೆ. ಸ್ತ್ರೀ-ಪುರುಷರಲ್ಲಿ ಸ್ವಚ್ಛಂದ ಪ್ರವೃತ್ತಿ. ವಿಷಯ ಭೋಗಾಸಕ್ತಿ, ತಂದೆ-ತಾಯಿಯರಲ್ಲಿ ಅನಾಸಕ್ತಿ, ಗುರು-ಹಿರಿಯರಲ್ಲಿ ಅನಾದರ ಬೆಳೆಯುತ್ತಿರುವುದರಿಂದ ಕುಟುಂಬಗಳ ಸ್ವಾಸ್ಥ್ಯವೇ ಛಿದ್ರಗೊಳ್ಳುತ್ತಿದೆ.

ಯಾವುದೇ ಒಂದು ಕುಟುಂಬ ಚೆನ್ನಾಗಿರಬೇಕಿದ್ದರೆ, ಆ ಕುಟುಂಬದಲ್ಲಿಯ ದಂಪತಿಗಳು ಅನ್ಯೋನ್ಯವಾಗಿರಬೇಕು. ಇಂದು ಸ್ತ್ರೀ-ಪುರುಷರು ತಮಗೆ ದೊರೆತಿರುವ ಸ್ವಾತಂತ್ರ್ಯವನ್ನು ಬಹುತರವಾಗಿ ಸ್ವೇಚ್ಛೆಯೆಂದು ಭಾವಿಸಿ ವರ್ತಿಸುತ್ತಿರುವುದು ಕಂಡುಬರುತ್ತದೆ. ವಿಷಮ ಪರಿಸ್ಥಿತಿಯ ವಿಶ್ಲೇಷಣೆಯನ್ನು ಡಾ. ರಾಧಾಕೃಷ್ಣನ್ ನೇರವಾಗಿಯೇ ತಿಳಿಸುತ್ತಾರೆ. -'ಈಚೆಗೆ ವಿಲಕ್ಷಣವಾದ ಭಾವನೆಯೊಂದು ಹಬ್ಬಿ ಹರಡುತ್ತಿದೆ. ಮದುವೆಯಾಗಿರುವ ಹೆಂಗಸಿಗೆ ಅವಳ ಗಂಡನ ಜೊತೆಗೆ ಇತರ

---

೧೦೬. ಕಲ್ಕಿ. ಪು. ೨೧

ಪ್ರೇಮಿಗಳೂ ಇರುವುದು ಅವಶ್ಯವೆಂಬುದೇ ಆ ವಿಲಕ್ಷಣ ಭಾವನೆ. ಅನೇಕ ಗೃಹಿಣಿಯರು ಇದಕ್ಕೆ ಆಹುತಿಯಾಗಿ ತಮ್ಮ ಶೀಲವನ್ನು ಕಳೆದುಕೊಳ್ಳುತ್ತಿದ್ದಾರೆ. ಅದು ಪಾಪವೆಂಬ ಅಥವಾ ಅನ್ಯಾಯವೆಂಬ ಯೋಚನೆಯೇ ಅವರಿಗಿಲ್ಲ..... ಹೀಗೆ ಹೀನ ಚಾಳಿಗೆ ಬಿದ್ದು ಮನಸ್ಸಿಗೆ ತೋರಿದಂತೆ ವಿಹಾರ ಮಾಡುವುದೇ ಸಾಮಾಜಿಕ ಕರ್ತವ್ಯವೆಂಬ ಭಾವನೆಯೂ ಕೆಲವು ಗುಂಪುಗಳವರಿಗೆ ಉಂಟಾಗುತ್ತಿದೆ. ಈ ರೀತಿ ನಡಾವಳಿ ಸ್ವಾತಂತ್ರ್ಯದ ಹೆಸರಿನಲ್ಲಿಯೂ ಆತ್ಮ ವಿನೋದದ ನೆವದಲ್ಲಿಯೂ, ಕೆಟ್ಟ ಚಾಳಿಯೂ ಸಾಮಾಜಿಕ ಕರ್ತವ್ಯವೆಂಬ ವಿಲಕ್ಷಣ ಭಾವನೆಯಿಂದಲೂ ಈಗ ವ್ಯಭಿಚಾರ ಮುಂತಾದ ಅಕಾರ್ಯಗಳು ನಡೆಯುತ್ತಿವೆ[೧೦೭] ಎಂದು ವಿಶ್ಲೇಷಿಸುತ್ತ ಸ್ತ್ರೀಯರ ಈ ನೈತಿಕ ಅಧಃಪತನಕ್ಕೆ ಕಾರಣ ಪುರುಷ ಪ್ರಧಾನ ಸಮಾಜದ ನಿಯಮ ನಿಬಂಧನೆಗಳು ಎಂಬುದನ್ನೂ ತಿಳಿಯಪಡಿಸುತ್ತಾರೆ. 'ನಮ್ಮ ಕಾನೂನಿನ ವಿಧಾತರೂ, ರಕ್ಷಕರೂ ತಮ್ಮ ಹೆಂಗಸರಿಗೂ ಆತ್ಮವುಂಟು ಎಂಬುದನ್ನು ಅರಿತಿಲ್ಲ; ಅವರಿಗೂ ಕಾಮನೆಗಳುಂಟು. ಅವರ ಸ್ವಪ್ನಗಳನ್ನೂ, ಆಕಾಂಕ್ಷೆಗಳನ್ನೂ ಪಾಲ್ಗೊಳ್ಳುವವರನ್ನು ಅವರು ನಿರೀಕ್ಷಿಸುತ್ತಾರೆ ಎಂಬುದನ್ನು ಅರಿತಿಲ್ಲ.[೧೦೭ಅ]

'ಎಲ್ಲಿಯವರೆಗೆ ನಮ್ಮ ಹೆಂಗಸರನ್ನು ಗಂಡಸರ ದಾಸಿಯರು, ಅವರ ಸ್ವಚ್ಛಂದತೆಗೆ ಗೊಂಬೆಗಳು ಎಂದು ಬಗೆಯುತ್ತೇವೆಯೋ ಅಲ್ಲಿಯವರೆಗೆ ಸಾಂಘಿಕ ವ್ಯವಸ್ಥೆಯಲ್ಲಿ ಅನಾಚಾರ ಇದ್ದೇ ಇರುತ್ತದೆ. ಹೆಂಗಸರ ಗುಣ ಪಾತಿವ್ರತ್ಯ ಮತ್ತು ಗಂಡನಿಗೆ ವಿಧೇಯತೆ ಎಂದು ಹೇಳುವ ಸಂಪ್ರದಾಯವು ಗಂಡಸಿನ ದಬ್ಬಾಳಿಕೆಗೆ ಕ್ಷುಲ್ಲಕವಾದ ಸಮಾಧಾನ. ಗಂಡಸಿನಲ್ಲಿ ಯಾವುದು ಸದ್ಗುಣವೋ ಹೆಂಗಸಿನಲ್ಲೂ ಅದೇ ಸದ್ಗುಣ. ನಮ್ಮ ನಡುವೆ ಹೆಂಗಸರನ್ನು ತಮ್ಮ ಕಾಮಕ್ಕೆ ಬೇಕಾದಂತೆ ಉಪಯೋಗಿಸಿಕೊಳ್ಳುವ ನಿಷ್ಕರುಣಿಗಳಾದ ಭಂಡರಿರುವುದು ದುರದೃಷ್ಟ. ಅವರು ಮಾನವ ಮೃಗಗಳು, ವಿಷಯಕ್ಕೆ ಗುಲಾಮರು'[೧೦೭ಬ] ಆಧುನಿಕ ಶಿಕ್ಷಣ ಪಡೆಯುತ್ತಿರುವ ಮಹಿಳೆ ತನ್ನ ಹಕ್ಕುಗಳ ಬಗ್ಗೆ ಜಾಗೃತಿಯಾಗಿರುವಳು. ಅದರ ಜೊತೆಗೆ ಪುರುಷರಿಗೊಂದು ನಿಯಮ, ತನಗೊಂದು ನಿಯಮ ಏಕೆಂಬ ವಾಸ್ತವಿಕ ಪ್ರಶ್ನೆ ಮೂಡಿ, ಪುರುಷನಂತೆ ತಾನೂ ಅಂಕೆಯಿಲ್ಲದಂತೆ ವರ್ತಿಸತೊಡಗಿದ್ದಾಳೆ.

ಈ ರೀತಿಯ ವೈರುಧ್ಯದ ಮನೋಭಾವದಿಂದಾಗಿ ಸ್ತ್ರೀ-ಪುರುಷರಿಬ್ಬರೂ ಅಡ್ಡ ದಾರಿ ತುಳಿಯುತ್ತಿರುವುದರಿಂದ, ಅದರ ದುಷ್ಪರಿಣಾಮ ಮಕ್ಕಳ ಮೇಲೆ

---

೧೦೭. ಕಲ್ಕಿ, ಪು. ೨೪

೧೦೭ಅ. ಧರ್ಮದಲ್ಲಿ ಪೂರ್ವ ಮತ್ತು ಪಶ್ಚಿಮ, ಪು. ೧೨೦

೧೦೭ಬ. ಧರ್ಮದಲ್ಲಿ ಪೂರ್ವ ಮತ್ತು ಪಶ್ಚಿಮ, ಪು. ೧೧೯

ಉಂಟಾಗಿ, ಕೌಟುಂಬಿಕ ಜೀವನ ಹದಗೆಡುತ್ತಿದೆ. ಇದಲ್ಲದೇ ಇತ್ತೀಚೆಗೆ ದಾಂಪತ್ಯ ವಿಚ್ಛೇದನಗಳು (Divorces) ಹೆಚ್ಚಾಗುತ್ತಿವೆ. ಈ ವಿಚ್ಛೇದನಗಳಿಗೆ ಕಾರಣಗಳನ್ನೂ ಅದಕ್ಕೆ ಪರಿಹಾರಗಳನ್ನೂ ಡಾ. ರಾಧಾಕೃಷ್ಣನ್‌ರು ಆಲೋಚಿಸಿದ್ದಾರೆ.

'ಗಂಡ-ಹೆಂಡತಿಯರು ಪ್ರೇಮದಿಂದ ಅನೋನ್ಯವಾಗಿದ್ದರೆ, ಅದು ಪರಿಪೂರ್ಣತೆಯುಳ್ಳ ದಾಂಪತ್ಯ. ಪರಿಪೂರ್ಣತೆಯುಳ್ಳ ದಾಂಪತ್ಯದಲ್ಲಿ ಲೈಂಗಿಕ ಕ್ರಿಯೆಯು ಪವಿತ್ರ ಕ್ರಮವಾಗಿ ಪರಿಣಮಿಸುತ್ತದೆ. ಅದು ದಂಪತಿಗಳಲ್ಲಿ ಅಂತರಂಗವಾಗಿರುವ ಮನಸ್ಸು, ಮನಸ್ಸಿನ ಹೊಂದಿಕೆಯ ಬಾಹ್ಯ ಸಂಕೇತವೆನಿಸುತ್ತದೆ..... ಗುಣಗಳಲ್ಲಿ ಗಂಡನಿಗೂ ಹೆಂಡತಿಗೂ ಪರಸ್ಪರವಾಗಿ ಪೂರ್ಣ ಸಾದೃಶ್ಯವಿಲ್ಲದೆ ಕೆಲ ಕೆಲವು ಭೇದಗಳಿರಬಹುದು, ಆ ಭೇದಗಳನ್ನೇ ಅವರು ಅಚ್ಚುಮೆಚ್ಚು ಮಾಡಿಕೊಂಡು ರಮ್ಯವಾಗಿರುವ ಪ್ರೇಮದ ಅನುಬಂಧವನ್ನು ಅವರು ಕಲ್ಪಿಸಿಕೊಳ್ಳಬೇಕು. ಹಾಗೆ ಮಾಡದೇ ತಪ್ಪಿದರೆ ಆ ಭೇದಗಳ ದೆಸೆಯಿಂದಲೇ ಗಂಡ-ಹೆಂಡಿರಲ್ಲಿ ಪರಸ್ಪರವಾಗಿ ವಿರಸ ಹುಟ್ಟಲು ಕಾರಣವಾದೀತು. ಗಂಡ-ಹೆಂಡಿರಲ್ಲಿ ಅನ್ಯೋನ್ಯತೆಯುಂಟಾಗಬೇಕಾದರೆ ಅವರಿಬ್ಬರೂ ಒಟ್ಟುಗೂಡಿ ಅದಕ್ಕಾಗಿ ಪ್ರಯತ್ನಿಸಬೇಕು.'[೧೦೮] ಎಂಬುದನ್ನು ಒತ್ತಿ ಒತ್ತಿ ಹೇಳುತ್ತಾರೆ.

'ದಾಂಪತ್ಯವೆಂದರೆ ಕೇವಲ ಆನಂದ ಸಾಮ್ರಾಜ್ಯ, ಆ ಆನಂದಕ್ಕೆ ಏನಾದರೂ ಅಡ್ಡಿಯುಂಟಾದ ಕೂಡಲೇ ದಾಂಪತ್ಯವು ಕೊನೆಗಾಣಬೇಕು ಎಂಬ ತಪ್ಪು ಭಾವನೆಯೇ ದಾಂಪತ್ಯ ವಿಚ್ಛೇದನಗಳಿಗೆ ಮೂಲ ...... ದಂಪತಿಗಳಲ್ಲಿ ಒಬ್ಬರ ಮನೋಧರ್ಮವು ಇನ್ನೊಬ್ಬರ ಮನೋಧರ್ಮಕ್ಕೆ ಹೊಂದದಿರುವುದೂ, ಒಬ್ಬರು ಬಯಸುವ ಜೀವನ ವಿಧಾನವು ಇನ್ನೊಬ್ಬರಿಗೆ ಸರಿಬೀಳದಿರುವುದೂ ಸಾಮಾನ್ಯವಾಗಿ ದಾಂಪತ್ಯ ವಿಚ್ಛೇದನಗಳ ಕಾರಣಗಳು'[೧೦೯] ಎಂದು ವಿಶ್ಲೇಷಿಸಿದ್ದಾರೆ.

ಇದಲ್ಲದೇ, ಇತ್ತೀಚೆಗಿನ ಸ್ತ್ರೀ -ಪುರಷರ ಸಂಬಂಧಗಳ ಬಗ್ಗೆ ಬದಲಾವಣೆಯ ಹಿನ್ನೆಲೆಯಲ್ಲಿ ಆಧುನಿಕರು ಹೇಳುವ ಕೆಲವು ವಿಚಾರಗಳನ್ನು ವಿವರಿಸುತ್ತಾ 'ತನಗೆ ಒಬ್ಬಳು ಹೆಂಡತಿಯಿರುವಾಗ ಗಂಡನು ಮತ್ತೊಂದು ಮದುವೆ ಮಾಡಿಕೊಳ್ಳಬಹುದೆಂಬುದು. ಎಂದರೆ, ಏಕಪತ್ನೀತ್ವವು ಶ್ರೇಷ್ಠವಾದ ಧ್ಯೇಯವೆಂಬದುರಲ್ಲಿ ಸಂದೇಹವೇ ಇಲ್ಲ: ಆದರೆ ಅದರ ದೆಸೆಯಿಂದ ಕೋಟಿಗಟ್ಟಲೇ ಹೆಂಗಸರು ಮದುವೆಯ ಆಶೆಯನ್ನೇ ತೊರೆಯಬೇಕಾಗಿ ಬಂದಿದೆ; ಅವರಲ್ಲಿ ಹಲವರು

---

೧೦೮. ಅದೇ. ೧೨೧

೧೦೯. ಕಲ್ಕಿ ಪು. ೧೩೧

ಲೈಂಗಿಕ ಸುಖವಿಲ್ಲದೇ ಹಿಂಸೆ ಪಡುತ್ತಿದ್ದಾರೆ; ಗಂಡಸರ ಸಂಖ್ಯೆಗಿಂತ ಹೆಂಗಸರ ಸಂಖ್ಯೆಯು ಹೆಚ್ಚಾಗಿರುವುದೇ ಇದಕ್ಕೆ ಕಾರಣ ಆದುದರಿಂದ ಇದನ್ನು ತಪ್ಪಿಸುವ ಉದ್ದೇಶದಿಂದ ಏಕ ಪತ್ನೀತ್ವಕ್ಕೆ ಪ್ರತಿಯಾಗಿ ಒಬ್ಬ ಗಂಡಸಿಗೆ ಏಕಕಾಲದಲ್ಲಿ ಒಬ್ಬಳಿಗಿಂತ ಹೆಚ್ಚು ಸಂಖ್ಯೆಯ ಹೆಂಡತಿಯರಿರುವುದಕ್ಕೆ ಅನುಮತಿ ಕೊಟ್ಟು ಅವಕಾಶ ಕಲ್ಪಿಸುವುದು ಉಚಿತವಲ್ಲವೇ ಎಂಬುದನ್ನು ಕುರಿತು ಮತ್ತಷ್ಟು ಹೆಚ್ಚಾಗಿ ಪರ್ಯಾಲೋಚನೆ ಮಾಡುವುದು ಅವಶ್ಯಕ'[೧೧೦] ಎಂಬ ಆಧುನಿಕ ವಿಚಾರಗಳನ್ನು ವಿವರಿಸುತ್ತ ಡಾ. ರಾಧಾಕೃಷ್ಣನ್‌ರು ಈ ಸಮಸ್ಯೆಯ ಮೇಲೆ ಬೆಳಕು ಚೆಲ್ಲಲು ಪ್ರಯತ್ನಿಸಿದ್ದಾರೆ. 'ವಿವಾಹ ಸಂಬಂಧ ನಿಯಮಗಳು ತೀರ ಬಿಕ್ಕಟ್ಟಾಗಿರುವುದೂ ಬೇಜವಾಬ್ದಾರಿಯ ಸಂಗತಿಯೇ. ಹೆಂಗಸರಿಗೂ ಗಂಡಸರಿಗೂ ಸಮಾನವಾದ ನೀತಿ-ನಿಯಮಗಳಿರಬೇಕಾದುದು ಅತ್ಯಗತ್ಯ; ಆದರೆ ನೀತಿಯ ಮಟ್ಟವು ಕೆಳಕ್ಕಿಳಿಯುವುದಕ್ಕೆ ಅವು ಸಾಧಕವಾಗಿರಬಾರದು; ನೀತಿಯ ಮಟ್ಟ ಮೇಲಕ್ಕೇರುವುದಕ್ಕೆ ಅವು ಸಾಧಕವಾಗಬೇಕು'[೧೧೧] ಎಂದು ಸೂಚಿಸುತ್ತಾರೆ.

ಪಾಶ್ಚಿಮಾತ್ಯ ದೇಶಗಳಲ್ಲಿ ಇತ್ತೀಚೆಗೆ ಬೆಳೆಯುತ್ತಿರುವ **'ಪರೀಕ್ಷಾರ್ಥದ ವಿವಾಹ'** ಎಂಬ ಒಂದು ಗಂಟೆಯ ಕಾಲವಿರುವ ಗಂಡು-ಹೆಣ್ಣಿನ ಸಂಬಂಧವನ್ನು ಡಾ. ರಾಧಾಕೃಷ್ಣನ್‌ರು 'ಅನುಮತಿ ಕೊಡಲ್ಪಟ್ಟ ಸೂಳೆಗಾರಿಕೆ' (Licenced concubinage) ಎಂದು ಖಂಡಿಸುತ್ತಾರೆ ಮತ್ತು ಮುಂದುವರೆದು 'ದಾಂಪತ್ಯ ಧರ್ಮವೆಷ್ಟು ಪವಿತ್ರವಾದುದು ಎಂಬ ವಿಚಾರಗಳನ್ನು ಸರಿಯಾಗಿ ಮನದಟ್ಟು ಮಾಡಿಕೊಳ್ಳದೆ ತಪ್ಪು ಭಾವನೆಗಳನ್ನಿಟ್ಟುಕೊಂಡು ಮದುವೆ ಮಾಡಿಕೊಳ್ಳಕೂಡದು. ಮದುವೆಯ ಹೊಣೆಗಾರಿಕೆಯನ್ನರಿತುಕೊಳ್ಳದೆ ಬೇಜವಾಬ್ದಾರಿಯಿಂದ ಮದುವೆ ಮಾಡಿಕೊಳ್ಳಕೂಡದು'[೧೧೨] ಎಂದೂ ಎಚ್ಚರಿಸುತ್ತಾರೆ.

**ಮದುವೆ :** ಧಾರ್ಮಿಕ-ಆಧ್ಯಾತ್ಮಿಕ ಜೀವನ ಸಾಧನೆಗೆ ಬಾಧಕವೆಂಬ ಕೆಲವು ಮಾಯಾವಾದದ ಸಂನ್ಯಾಸಿಗಳ ತಪ್ಪು ಅಭಿಪ್ರಾಯವನ್ನು ಡಾ. ರಾಧಾಕೃಷ್ಣನ್‌ರು ದೂರೀಕರಿಸಿ, **ಯಾವನಾದರೂ ಮದುವೆ ಎಂಬುದರಿಂದ ಓಡಿ ಹೋಗುವುದೆಂದರೆ ಯುದ್ಧದಿಂದ ಓಡಿ ಹೋದ ಸೈನಿಕನಂತೆಯೇ.** ಮದುವೆಯೆನ್ನುವುದು ಪವಿತ್ರವೆಂದು ಗಣಿಸಲ್ಪಟ್ಟಿದೆ. ದೇವತೆಗಳೂ ಮದುವೆ ಮಾಡಿಕೊಂಡವರೆ' ಹಾಗೂ 'ಲೈಂಗಿಕ ಜೀವನವು ಅವಮಾನಕರ ಮತ್ತು ದೋಷಯುತವಾದುದೇನಲ್ಲ. ಮದುವೆಯೆಂಬ

---

೧೧೦. ಅದೇ ಪು. ೧೩೬

೧೧೧. ಅದೇ ಪು. ೧೩೬

೧೧೨. ಹಿಂದೂ ಜೀವನ ದರ್ಶನ, ಪು. ೧೪೦

ಸಂಸ್ಕಾರದಿಂದ ಗಂಡ-ಹೆಂಡಂದಿರಲ್ಲಿ ಬೌದ್ಧಿಕ ಮತ್ತು ನೈತಿಕ ಜೀವನ ಸಂಪರ್ಕ ಬೆಳೆಯುತ್ತದೆ. ಮದುವೆಎನ್ನುವುದು ಮಾನವನ ಬಲಹೀನತೆಗೆ ಒಂದು ಉಪಾಯವಾಗದೇ ಆಧ್ಯಾತ್ಮಿಕ ಪ್ರಗತಿಗೆ ಒಂದು ದಾರಿ ಆಗುತ್ತದೆ. ವ್ಯಕ್ತಿತ್ವದ ಬೆಳವಣಿಗೆಗೆ ಮತ್ತು ಸಂಸಾರ ಜೀವನದ ಆದರ್ಶ ಸಾಧನೆಗೆ ಮದುವೆ ಎನ್ನುವುದು ವಿಧಿಸಲಾಗಿದೆ. ಮದುವೆ ಎನ್ನುವುದಕ್ಕೆ ಈ ಸಾಮಾಜಿಕ ಅಂಶವಿದೆ'[೧೧೩] ಎಂಬುದನ್ನು ಸರಳವಾಗಿ, ನೇರವಾಗಿ ತಿಳಿಯಪಡಿಸಿದ್ದಾರೆ.

ಸುಮಧುರ ಪ್ರೇಮ-ಸ್ನೇಹ-ವಿಶ್ವಾಸಗಳ ನೆಲಗಟ್ಟಿನ ಮೇಲೆ ಕುಟುಂಬ ಜೀವನ ವ್ಯವಸ್ಥೆಗೊಂಡಿದ್ದರೆ ಆ ಕುಟುಂಬದಲ್ಲಿಯೂ ಜನರಲ್ಲಿ ಆತ್ಮೀಯತೆ, ಏಕತೆ, ಪರಸ್ಪರ ತಿಳುವಳಿಕೆ ಸಹಜವಾಗಿಯೇ ಮೂಡಿ ಬರುತ್ತದೆ. ಸುಸಂಸ್ಕೃತ ಜನರ ನಡೆ-ನುಡಿಗಳಿಂದಲೇ ಎಳೆಯರೂ ರೂಪುಗೊಳ್ಳುತ್ತಾರೆ. ಇಲ್ಲದಿದ್ದರೆ ಕುಟುಂಬ ವ್ಯವಸ್ಥೆಯೇ ಹಾಳಾಗುತ್ತದೆ. ಒಂದು ಜನಪದ ಗಾದೆಯಂತೆ ತಾಯಿ ಸೆರಗು ತೆಗೆದು ರಸ್ತೆಯಲ್ಲಿ ಅಡ್ಡಾಡಿದರೆ ಮಗಳು ಸೀರೆ ಕಳೆದು ಬತ್ತಲೆ ಓಡಾಡುತ್ತಾಳಂತೆ. ಇದರರ್ಥ ಸುಸಂಸ್ಕೃತ-ಸದ್ವರ್ತನೆಯವರಾಗಿ ಬೆಳೆಯಬೇಕಾದರೆ ಕುಟುಂಬದ ಹಿರಿಯರು ಮೊದಲಿಗೆ ಒಳ್ಳೆಯ ಚಾರಿತ್ರ್ಯವನ್ನು ಮೈಗೂಡಿಸಿಕೊಂಡಿರಬೇಕಾಗುತ್ತದೆ. ಹಿರಿಯರು ಸ್ವಲ್ಪ ತಪ್ಪಿದರೂ ಕಿರಿಯರು ಅಂಕೆ ತಪ್ಪಿ ಲಂಗುಲಗಾಮಿಲ್ಲದಂತೆ ಅಡ್ಡ ದಾರಿ ಹಿಡಿಯುತ್ತಾರೆ. ಆಗ ಹಿರಿಯರು ಕಿರಿಯರನ್ನು ತಿದ್ದುವ, ಬುದ್ಧಿ ಹೇಳುವ ನೈತಿಕ ಹಕ್ಕನ್ನು ಕಳೆದುಕೊಂಡಿರುತ್ತಾರೆ.

ಇನ್ನು ಸಮಾಜ ಕುರಿತು ಡಾ. ರಾಧಾಕೃಷ್ಣನ್‌ರು ಬಹು ವಿಶಾಲವಾದ ಮನೋಭಾವನೆಯನ್ನಿರಿಸಿಕೊಂಡು ವಿಚಾರ ವ್ಯಕ್ತಪಡಿಸಿದ್ದಾರೆ. ಭಾರತ ದೇಶ ಮೂಲಭೂತವಾಗಿ ಧರ್ಮ-ಸಂಸ್ಕೃತಿ-ಉನ್ನತ ನಾಗರಿಕ ಜೀವನ ಧ್ಯೇಯ-ಆದರ್ಶಗಳನ್ನಿರಿಸಿಕೊಂಡಿದ್ದ ದೇಶ, ಈ ದೇಶ ವಿಶಾಲವಾಗಿದ್ದಷ್ಟೂ ಇಲ್ಲಿಯ ಸಮಸ್ಯೆಗಳೂ ವಿಶಾಲವಾಗಿವೆ. ದೇಶದ ನೂರಾರು ಮತ, ಪಂಗಡಗಳು, ಸಾವಿರಾರು ಸಂಪ್ರದಾಯ-ರೂಢಿಗಳು, ಜಾತಿ-ಜನಾಂಗಗಳು ತುಂಬ ಸಂಕೀರ್ಣವಾಗಿವೆ. ವಿದೇಶಿಯನೊಬ್ಬ ಬಂದು ಈ ದೇಶದಲ್ಲಿ ತಿರುಗಾಡಿ ನೋಡಿದರೆ, ಇದೇನು ಒಂದೇ ದೇಶವೋ ಅಥವಾ ನೂರಾರು ಸಾವಿರಾರು ಜನ-ಸಮಾಜಗಳ ತುಕಡಿಗಳೋ ಎಂದು ಸಂದಿಗ್ಧಕ್ಕೆ ಸಿಲುಕಿ ದಿಗ್‌ಭ್ರಾಂತನಾಗಬಹುದು. ಅಂತಹ ಚಿತ್ರ ವಿಚಿತ್ರ ಸಮಾಜ ವ್ಯವಸ್ಥೆ ಇಲ್ಲಿದೆ. ಹೀಗಿದ್ದೂ ಈ ದೇಶವನ್ನು ಯಾವುದೋ ಒಂದು ಆಂತರಿಕ ಶಕ್ತಿ ಬಂಧಿಸಿದೆ. ಏಕಭಾವ ಒಡಮೂಡಿಸಿದೆ.

---

೧೧೩. ಹಿಂದೂ ಜೀವನ ದರ್ಶನ, ಪು, ೫೭

ನಮ್ಮ ದೇಶದ ಸಮಾಜ ವ್ಯವಸ್ಥೆ ಮೂಲತಃ ಧರ್ಮ ತಳಬದಿಯ ಮೇಲೆ ರೂಪಿತವಾದ್ದರಿಂದ, ಪುರಾತನ ಕಾಲದಿಂದ ವರ್ಣ ವ್ಯವಸ್ಥೆಯಾಗಿ ಹಲವಾರು ಹೊಸ ಹೊಸ ಕ್ಲಿಷ್ಟಕರ ಸಮಸ್ಯೆಗಳನ್ನು ಉದ್ಭವಿಸುವಂತೆ ಮಾಡಿದೆ. ಡಾ. ರಾಧಾಕೃಷ್ಣನ್‌ರು ಈ ಬಗ್ಗೆ ಬರೆಯುತ್ತ 'ಮನುವಿನ ಪ್ರಕಾರ ಎಲ್ಲರೂ ಜನ್ಮತಃ ಶೂದ್ರರು. ಎರಡನೆಯ ಜನ್ಮ ಪಡೆದಾಗ ದ್ವಿಜರಾಗುತ್ತಾರೆ. ಜಾತಿ ಎಂದರೆ ಶೀಲದ ಪ್ರಶ್ನೆ. ತನ್ನ ಕರ್ಮಗಳಿಂದಲ್ಲದೆ ಮನೆತನದಿಂದ ಅಥವಾ ಜಾತಿಯಿಂದ ಒಬ್ಬನು ಬ್ರಾಹ್ಮಣನಾಗುವುದಿಲ್ಲ. ಚಂಡಾಲನೂ ತನ್ನ ಶುದ್ಧ ಶೀಲದಿಂದ ಬ್ರಾಹ್ಮಣನಾಗುತ್ತಾನೆ. ಬ್ರಾಹ್ಮಣರೇ ಪೂಜಿಸುತ್ತಿದ್ದ ಹಲವು ಋಷಿಗಳು ಶುದ್ಧ ಜಾತಿಯವರಾಗಿರಲಿಲ್ಲ, ವಶಿಷ್ಟ ಮುನಿಯು ಜಾರೆಯ ಪುತ್ರ. ವ್ಯಾಸನು ಮತ್ಸ್ಯಕನ್ಯೆಯಲ್ಲಿ ಜನಿಸಿದವನು. ಪರಾಶರನು ಚಂಡಾಲ ಸ್ತ್ರೀಯ ಮಗನು. ಶೀಲ ಮಾತ್ರ ಲೆಕ್ಕಕ್ಕೆ ಬರುತ್ತದೆ. ಜಾತಿ ಅಲ್ಲ, ಪೂರ್ಣತೆಯನ್ನು ಸಾಧಿಸುವ ವಿಚಾರವಾಗಿ ಹೇಳುವುದಾದರೆ ಅತ್ಯಂತ ಹೀನ ಕುಲದವನೂ ಉಚ್ಚಕುಲದವರು ಸಾಧಿಸಿದಷ್ಟೇ ಸಾಧಿಸಬಹುದು'[೧೧೪] ಎಂದು ತಿಳಿಸುತ್ತಾರೆ.

ಈ ಕುರಿತು ಇನ್ನಷ್ಟು ಮುಂದುವರೆದು ಹೇಳುತ್ತಾರೆ. 'ಭಾರತ ಚರಿತ್ರೆಯ ಆದಿಯಿಂದಲೂ ಸಮಾನತೆಗಾಗಿ ಕಲಹ ನಡೆಯುತ್ತಲೇ ಇದೆ. ಒಂದು ನಿದರ್ಶನ ವಶಿಷ್ಟ-ವಿಶ್ವಾಮಿತ್ರರ ಕಲಹದಲ್ಲಿ ನಮಗೆ ಸಿಗುತ್ತದೆ. ಒಬ್ಬನು ಸನಾತನತೆಯ ಆಧಾರವಾಗಿ ನವೀನತೆಯ ಶತ್ರುವಾಗಿದ್ದರೆ, ಇನ್ನೊಬ್ಬನು ಪ್ರಗತಿ ಸ್ವಾತಂತ್ರ್ಯ ಮುಂತಾದವುಗಳನ್ನು ಎತ್ತಿ ಹಿಡಿದ ಧುರೀಣ. ಸನಾತನಿಯಾದ ವಶಿಷ್ಟನು ವೈದಿಕ ಧರ್ಮವನ್ನು ಆರ್ಯರಿಗೆ ಮಾತ್ರ ಮೀಸಲಾಗಿಡಬೇಕೆಂದು ಹೇಳಿದರೆ ವಿಶ್ವಾಮಿತ್ರನು ಅದು ಸರ್ವರಿಗೂ ಸಿಗುವಂತೆ ಆಗಬೇಕೆಂದು ಹೊಡೆದಾಡಿದನು. ಉಪನಿಷತ್ತುಗಳು ಪ್ರಜಾನುಗುಣವಾಗಿ ಧ್ಯೇಯ ತಾಳಿದ್ದವು.'[೧೧೫]

ಸಮಾಜವು ಜಾತಿ ವ್ಯವಸ್ಥೆಯನ್ನು ಒಪ್ಪಿಕೊಂಡು ಬೆಳೆದು ಬಂದುದರಿಂದ ಸ್ವಾರ್ಥಿಗಳಾದ ಕೆಲವರು ತಮ್ಮ ವೈಯಕ್ತಿಕ ಹಿತಾಸಕ್ತಿಗಾಗಿ ಶೂದ್ರ ವರ್ಗವನ್ನು ಶೋಷಿಸುತ್ತಲೇ ಬಂದಾಗ ಪ್ರಮುಖವಾಗಿ ೧೨ನೇ ಶತಮಾನದಲ್ಲಿ ಬಸವಣ್ಣನವರು ಕ್ರಾಂತಿಕಾರಕವಾಗಿ ಪ್ರತಿಭಟಿಸಿ ಚಳುವಳಿಯನ್ನೇ ಹೂಡಿದರು. ಇದನ್ನು ಡಾ. ರಾಧಾಕೃಷ್ಣನ್‌ರು ಹೀಗೆ ಬರೆದಿರುವರು. 'The reform movement of Basava (middle of the twelth century) is marked by its revolt

೧೧೪. ಅದೇ, ಪು. ೮೭

೧೧೫. ಅದೇ, ಪು. ೮೮

against the Supremacy of the Brahmin, though Basava himself was a Brahimn. This sect does not accept the hypothesis of rebirth.'[೧೧೬]

ಬಸವಣ್ಣನವರ ಸುಧಾರಣಾ ಚಳುವಳಿಯು ಹನ್ನೆರಡನೆಯ ಶತಮಾನದ ಮಧ್ಯಭಾಗದಲ್ಲಿ, ಬ್ರಾಹ್ಮಣ ಶ್ರೇಷ್ಠತೆಯ ವಿರುದ್ಧ ಜರುಗಿದುದು ಗಮನಾರ್ಹವಾಗಿದೆ. ಸ್ವತಃ ಬಸವಣ್ಣನವರು ಬ್ರಾಹ್ಮಣರಾಗಿದ್ದರು. ಈ ಮತವು ಪುನರ್ಜನ್ಮ ಸಿದ್ಧಾಂತವನ್ನು ಒಪ್ಪಿಕೊಳ್ಳುವುದಿಲ್ಲ ಎಂದು ತಿಳಿಸುತ್ತ ಈ ವರ್ಣಜಾತಿ ವ್ಯವಸ್ಥೆಯ ವಿರುದ್ಧ ತೀವ್ರತರವಾಗಿ ಪ್ರತಿಭಟಿಸಿದ ಲಿಂಗವಂತ ಧರ್ಮವು ಇಂದೇನಾಗಿದೆಯೆಂಬುದನ್ನೂ ಎತ್ತಿ ತೋರಿಸುತ್ತಾರೆ ಡಾ. ರಾಧಾಕೃಷ್ಣನ್‌ರು 'Though Lingayat reformation started with a vigorous protest against the caste, system, the Lingayats today observe caste divisions'[೧೧೭] ಜಾತಿ ವ್ಯವಸ್ಥೆಯ ವಿರುದ್ಧ ಉಗ್ರವಾಗಿ ಪ್ರತಿಭಟಿಸಿದ ಲಿಂಗವಂತರು ಇಂದು ಜಾತಿ ಉಪಜಾತಿಗಳನ್ನು ಮಾಡಿಕೊಂಡಿರುವುದೂ ಕೂಡ ಕಟುಸತ್ಯವಾಗಿದೆ.

ಇಂದು ಭಾರತದಲ್ಲಿ ಜಾತಿ ವ್ಯವಸ್ಥೆಯ ತಳಹದಿಯ ಮೇಲೆ ಸಮಾಜ ಜೀವನ ಭದ್ರವಾಗಿ ಬೇರೂರಿರುವುದರಿಂದ, ವರ್ಗ-ಸಂಘರ್ಷದ ಬಿಸಿ ತಟ್ಟದಂತಾಗಿದೆ. ಬಡತನ, ದಾರಿದ್ರ್ಯ ಮುಂತಾದವಕ್ಕೆಲ್ಲ ಹಣೆಬರಹವೆಂಬ ದೈವವಾದವನ್ನೇ ಮೌಢ್ಯವಾಗಿ ಸಾಮಾನ್ಯ ಜನತೆ ಬಲವಾಗಿ ನಂಬಿರುವುದರಿಂದ ಸಮಾನತೆಯ ಸಮಾಜವನ್ನು ರೂಪಿಸುವುದು ಕಠಿಣವೆನಿಸಿದೆ. ಸತ್ಯಶುದ್ಧ ಕಾಯಕವೇ ಬಡತನ ಸಮಸ್ಯೆಗೆ ಪರಿಹಾರವೆಂಬುದು ತಿಳಿಯದಂತಾಗಿದೆ.

ಈಗಿರುವ ವಿಷಮತೆಯ ಸಮಾಜ ಜೀವನದ ಬಗ್ಗೆ, ಅದರ ಪರಿವರ್ತನೆಯ ಬಗ್ಗೆ ಡಾ. ರಾಧಾಕೃಷ್ಣನ್‌ರು ಬರೆಯುತ್ತ 'ಆಧುನಿಕ ಜೀವನವು ಒಂದು ತೊಡಕಾದ ಯಂತ್ರದಂತಿದೆ. ನಾವು ಅದರ ಹೊರ ಭಾಗಗಳನ್ನು ಬದಲಾಯಿಸುವ ಕೆಲಸದಲ್ಲಿ ಮಾತ್ರ ಮಗ್ನರಾಗಿದ್ದೇವೆ. ಆದರೆ ಜನರ ಯೋಗ್ಯತೆಯನ್ನು, ಯೋಗ್ಯರಾದ ಸಜ್ಜನರ ಸಂಖ್ಯೆಯನ್ನು ಹೆಚ್ಚು ಮಾಡುವ ಕೆಲಸವು ಅದಕ್ಕಿಂತ ಬಹಳಮುಖ್ಯ. ಈ ಮುಖ್ಯ ಕಾರ್ಯವನ್ನು ನೆರವೇರಿಸದೇ ಸಾಮಾಜಿಕ ಪದ್ಧತಿಗಳನ್ನು, ಸಾಮಾಜಿಕ ವ್ಯವಸ್ಥೆಗಳನ್ನು ಬದಲಾಯಿಸಿ ಮಾರ್ಪಡಿಸಿದ ಮಾತ್ರಕ್ಕೆ ನಮಗೆ ಅಷ್ಟರಿಂದ ಸಹಾಯವಾಗಲಾರದು. ನಮ್ಮ ಉದ್ದೇಶವು ನೆರವೇರಲಾರದು.[೧೧೮] ಎಂದು ತಿಳಿಯಪಡಿಸುತ್ತಾರೆ.

---

೧೧೬. Indian Philosophy Vol II, p. 730

೧೧೭. Ibid, p. 730 Foot Note

೧೧೮. ಕಲ್ಕಿ ಅಥವಾ ನಾಗರಿಕತೆಯ ಭವಿಷ್ಯ, ಪು. ೧೪೫

## ೧೦. ಡಾ. ರಾಧಾಕೃಷ್ಣನ್‌ರ ರಾಜಕೀಯ ವಿಚಾರಗಳು.

ಡಾ. ರಾಧಾಕೃಷ್ಣನ್‌ರು ತತ್ತ್ವಜ್ಞಾನ ಪ್ರಾಧ್ಯಾಪಕರಾಗಿ ಶಿಕ್ಷಣ ತಜ್ಞರಾಗಿ ಇಡೀ ಪ್ರಪಂಚವನ್ನೇ ಸುತ್ತಿ ಅಪಾರವಾದ ಲೋಕಾನುಭವ-ಜೀವನಾನುಭವ ಪಡೆದವರು. ದೇಶಕ್ಕೆ ಸ್ವಾತಂತ್ರ್ಯ ಸಿಕ್ಕ ನಂತರ ಈ ದೇಶದ ರಾಯಭಾರಿಯಾಗಿ ವಿದೇಶಗಳಲ್ಲಿ ವಿಶೇಷವಾಗಿ ರಶಿಯಾದಲ್ಲಿ ಕಾರ್ಯನಿರ್ವಹಿಸಿ ಅನಂತರ ಉಪರಾಷ್ಟ್ರಪತಿಯಾಗಿ, ರಾಷ್ಟ್ರಪತಿಯಾಗಿ ಕಾರ್ಯನಿರ್ವಹಿಸಿದರು. ಸ್ವಾಮಿ ವಿವೇಕಾನಂದ, ರವೀಂದ್ರನಾಥ ಠಾಕೂರ ಹಾಗೂ ಮಹಾತ್ಮಾ ಗಾಂಧೀಜಿಯವರ ಪ್ರಭಾವಕ್ಕೊಳಗಾಗಿದ್ದವರು. ಕಮ್ಯುನಿಸಂ ಹಾಗೂ ಪ್ರಜಾಪ್ರಭುತ್ವಗಳ ವ್ಯವಸ್ಥೆಯನ್ನು ಅಧ್ಯಯನ, ಚಿಂತನ ಮಾಡಿದ ಪ್ರಜ್ಞಾವಂತರವರು.

ಭಾರತ ದೇಶವು ಪ್ರಜಾಪ್ರಭುತ್ವ ಪದ್ಧತಿಯನ್ನು ತನ್ನ ಆಡಳಿತ ವ್ಯವಸ್ಥೆಗೆ ಒಪ್ಪಿಕೊಂಡಿದೆ. ಪ್ರಜಾತಂತ್ರದ ಆಡಳಿತ ಕ್ರಮದ ಬಗ್ಗೆ ವಿವರಿಸುತ್ತ ಡಾ. ರಾಧಾಕೃಷ್ಣನ್‌ರು 'ಪ್ರಜಾತಂತ್ರದ ಆಡಳಿತ ಕ್ರಮ ಎಂದರೆ ಪ್ರಜಾ ಸಮುದಾಯದಿಂದ ರಾಜ್ಯಾಡಳಿತ ಅಥವಾ ಪ್ರಜಾಸಮುದಾಯದ ಸ್ವರಾಜ್ಯವೆಂದು ಅರ್ಥ. ಪ್ರಜೆಗಳು ಚುನಾಯಿಸಿದ ಪ್ರತಿನಿಧಿಗಳಿಂದ ಸರ್ಕಾರವು ನಡೆಯುವುದು ಅದರ ಲಕ್ಷಣ. ಪ್ರಜೆಗಳ ಮೇಲೆ ಸರ್ಕಾರದ ಅಧಿಕಾರ ಪ್ರದರ್ಶನವು ಅತ್ಯಲ್ಪವಾಗಿದ್ದರೆ ಅದು ಅತ್ಯುತ್ತಮವಾದ ಸರ್ಕಾರ[೧೧೯]' ಎಂದು ತಿಳಿಸುತ್ತಾರೆ.

ಈ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಉಂಟಾಗಿರುವ ನ್ಯೂನ್ಯತೆಗಳನ್ನು ನೇರವಾದ ಬಿಚ್ಚು ನುಡಿಗಳಲ್ಲಿಯೇ ತೋರಿಸಿದ್ದಾರೆ. 'ಯಾವುದಾದರೊಂದು ದೇಶದಲ್ಲಾಗಲಿ ಚುನಾವಣೆಗಳು ನಡೆದು ಪ್ರಜಾತಂತ್ರದ ಆಡಳಿತವು ಏರ್ಪಡುವಾಗ್ಗೆ ದೇಶದಲ್ಲಿ ಅತ್ಯಂತ ಸಮರ್ಥರಾದವರಿಗೆ ಆಡಳಿತಗಾರರಾಗುವ ಅವಕಾಶ ದೊರೆಯುವುದೇ ವಿರಳ..... ಆಡಳಿತ ಸ್ಥಾನಗಳಿಗೆ ಬಂದವರಿಗೆ ಆಡಳಿತ ಸಾಮರ್ಥ್ಯವಿರುವುದಿಲ್ಲ. ಆಡಳಿತ ಸಾಮರ್ಥ್ಯವಿರುವವರಿಗೆ ಆಡಳಿತ ಸ್ಥಾನಗಳಿಗೆ ಬರುವುದಕ್ಕೆ ಅವಕಾಶವೇ ದೊರೆಯುವುದಿಲ್ಲ. ಇದು ಇಂದಿನ ವಿಲಕ್ಷಣ ಸನ್ನಿವೇಶ.

---

೧೧೯. ಅದೇ. ೧೪೫, ೧೪೬

ಪ್ರಜಾತಂತ್ರದ ವ್ಯವಸ್ಥೆಯಿಂದ ಈಗ ಕೆಲಸ ನಡೆಯುತ್ತಿರುವ ರೀತಿಯು ತೃಪ್ತಿಕರವಾಗಿಲ್ಲದಿರುವುದಕ್ಕೆ ಇದೇ ಕಾರಣ'.[೧೨೦]

ನಮ್ಮ ದೇಶದಲ್ಲಿ ಪ್ರಜೆಗಳಿಂದ ಚುನಾಯಿತರಾದ ಪ್ರತಿನಿಧಿಗಳು ಸರ್ಕಾರ ರಚಿಸಿಕೊಂಡು ಆಡಳಿತ ನಡೆಸುತ್ತಿರುವುದೇನೋ ನಿಜವೇ. ಆದರೆ ಇವುಗಳ ಹಿನ್ನೆಲೆಯಲ್ಲಿ ನಿಜವಾಗಿ ಆಡಳಿತ ನಡೆಸುವ ಶಕ್ತಿಗಳಾವವು ಎಂಬುದನ್ನು ಡಾ. ರಾಧಾಕೃಷ್ಣನ್‌ರು ಸ್ಪಷ್ಟವಾಗಿ ತಿಳಿಯಪಡಿಸುತ್ತಾರೆ. 'ಪ್ರಜಾತಂತ್ರದ ಹೆಸರಿನಲ್ಲಿ ಆಡಳಿತ ನಡೆಯುವುದೇನೋ ಪ್ರಭಾವಶಾಲಿಗಳ ಗುಂಪಿನವರಿಂದ, ಆ ಗುಂಪು ಒಂದು ಭಾರಿ ಯಂತ್ರದಂತೆ ಕೆಲಸ ಮಾಡುತ್ತದೆ. ಪ್ರಜೆಗಳಿಂದ ಚುನಾಯಿತರಾದ ಪ್ರತಿನಿಧಿಗಳು ಆ ಭಾರಿ ಯಂತ್ರಕ್ಕೆ ಅಧೀನರಾಗಿ ಅದರ ಉಪಕರಣಗಳಂತೆ ಕೆಲಸ ಮಾಡುತ್ತಾರೆ. ಅವರಿಗೆ ಯಾವುದೊಂದು ಸ್ವಾತಂತ್ರ್ಯವೂ ಇಲ್ಲ. ಹಿನ್ನೆಲೆಯ ಗುಂಪಿನವರು ಹೇಳಿದಂತೆ ಅವರು ಕೆಲಸ ಮಾಡುತ್ತಾರೆ.'.[೧೨೧]

ಇಂತಹ ರಾಜಕೀಯ ಆಡಳಿತ ದುರವಸ್ಥೆಯಿಂದಾಗಿ ದೇಶದ ಸಾಂಪತ್ತಿಕ ಸ್ಥಿತಿ ಏನಾಗಿದೆ ಎಂಬುದು ಸರ್ವರಿಗೂ ವಿದಿತವೇ ಆಗಿರುವ ತೆರೆದಿಟ್ಟ ಗೌಪ್ಯವಾಗಿದೆ. ಈ ಕುರಿತು ಡಾ. ರಾಧಾಕೃಷ್ಣನ್‌ರು ವಿಶ್ಲೇಷಿಸಿದ್ದಾರೆ, 'ಇಂದು ಆರ್ಥಿಕ ದೃಷ್ಟಿಯಿಂದ ಸಮತೆಯೆಂಬುದೇ ಇಲ್ಲ. ಎಂದರೆ ಕೆಲವರು ಹಣದ ರಾಶಿಯ ಮೇಲೆ ಕುಳಿತು ಸುಖಪಡುತ್ತಿದ್ದಾರೆ. ಉಳಿದವರಲ್ಲಿ ಅನೇಕರು ತೀರ ಬಡವರಾಗಿ ಕಾರ್ಪಣ್ಯಪಡುತ್ತಿದ್ದಾರೆ. ಆರ್ಥಿಕ ದೃಷ್ಟಿಯಿಂದ ಸಮತೆಯಿಲ್ಲದಿರುವಲ್ಲಿ ರಾಜಕೀಯ ದೃಷ್ಟಿಯಿಂದ ಸಮತೆಯಿರುವುದೂ ಸಾಧ್ಯವಿಲ್ಲ.[೧೨೨]

**ರಾಷ್ಟ್ರಪಿತ ಮಹಾತ್ಮಾಗಾಂಧೀಜಿಯವರು** ಸಹ ಇದೇ ಮಾತನ್ನು ಹೇಳಿದ್ದಾರೆ., 'ಭಾರತಕ್ಕೆ ಬೇಕಾಗಿರುವುದು ೧೯೦೦ ಮೈಲುಗಳ ಉದ್ದ, ೧೫೦೧ ಮೈಲುಗಳ ಅಗಲವಿರುವ ಈ ಉಪಖಂಡದ ೭.೫ ಲಕ್ಷ ಹಳ್ಳಿಗಳ ಕೈಗೆಟಕುವಂತೆ ಬಂಡವಾಳವನ್ನು ಹಂಚುವುದೇ ಹೊರತು, ಆ ಬಂಡವಾಳ ಕೆಲವೇ ಕೈಗಳಲ್ಲಿ ಕೇಂದ್ರೀಕೃತವಾಗುವುದಲ್ಲ.'[೧೨೨ಅ]

ಇಂಥ ವಿಷಮ ರಾಜಕೀಯ ಪರಿಣಾಮದಿಂದಾಗಿ ಸಾಮಾನ್ಯ ಜನತೆಯಲ್ಲಿ ರಾಜಕೀಯವೆಂದರೆ ಅಜ್ಞಾನ, ಶಿಸ್ತುಗೆಟ್ಟ ನಡವಳಿಕೆ ಮತ್ತು ಕೀಳು ಅಭಿರುಚಿಗಳೇ ಪ್ರಜಾತಂತ್ರದ ಲಕ್ಷಣಗಳೆಂಬ ಭ್ರಾಂತಿಯುಂಟಾಗಿದೆ ಎಂದು ಅವರು ತಿಳಿಸುತ್ತಾರೆ.

---

೧೨೦. ಅದೇ. ಪು. ೪೨

೧೨೧. ಅದೇ. ಪು. ೪೨

೧೨೨. ಅದೇ. ಪು. ೪೭

೧೨೨ ಅ. ನನ್ನ ಕನಸಿನ ಭಾರತ ಯಂಗ್ ಇಂಡಿಯ. ೨೩-೩-೧೯೨೧

ನಮ್ಮ ದೇಶದಲ್ಲಿ ರಾಜಕೀಯ ವ್ಯವಸ್ಥೆ ಸುಧಾರಿಸಬೇಕಾದರೆ ನಮ್ಮ ಪ್ರಜೆಗಳಲ್ಲಿ, ಮತದಾರರಲ್ಲಿ ಸರಿಯಾದ ಜಾಗೃತಿ, ಅರಿವು ಉಂಟಾಗಬೇಕು. 'It is our desire to develop a democratic set up in Society. Democracy has different sides to it. It is a political arrangement. It is an economic approach, it is an ethical way of life.'[೧೨೩] ನಮ್ಮ ಸಮಾಜದಲ್ಲಿ ಪ್ರಜಾಪ್ರಭುತ್ವದ ವ್ಯವಸ್ಥೆ ಬರಬೇಕು, ಅದಕ್ಕೆ ಹಲವಾರು ಮುಖಗಳಿವೆ. ಅದು ರಾಜಕೀಯ ವ್ಯವಸ್ಥೆ, ಆರ್ಥಿಕ ವಿಧಾನ, ನೈತಿಕ ಜೀವನದ ಮಾರ್ಗವೂ ಆಗಿರಬೇಕು ಎಂದು ತಿಳಿಸುತ್ತಾರೆ.

ನಿಜವಾದ ಪ್ರಜಾತಂತ್ರವೆಂದರೆ ನಾಗರಿಕರಲ್ಲಿ ಎಷ್ಟೇ ಭಿನ್ನಾಭಿಪ್ರಾಯಗಳಿದ್ದರೂ ಅವರೆಲ್ಲ ಒಂದೇ ಸಾಮಾನ್ಯ ಗುರಿಗಾಗಿ ಕಟಿಬದ್ಧರಾಗಿರಬೇಕೆಂದು ಡಾ. ರಾಧಾಕೃಷ್ಣನ್‌ರು ಹೇಳುತ್ತಾರೆ. 'A true democracy is a community of citizens differing from one another but all bound to a common goal'.[೧೨೪]

ಇಂದು **ನಮ್ಮ ನಿಜವಾದ ವೈರಿ ಯಾರು?** ನಾವು ಯಾರ ವಿರುದ್ಧ ಹೋರಾಡಬೇಕೆಂಬುದನ್ನು ಡಾ. ರಾಧಾಕೃಷ್ಣನ್ ತಿಳಿಸುತ್ತಾರೆ. 'The enemy we have to fight is not capitalism or communism. It is our folly, our spirituall blindness, our Love of Power, our lust for domination.[೧೨೫] ಅಂದರೆ ನಾವು ಹೋರಾಡಬೇಕಾದ ವೈರಿ ಕಮ್ಯುನಿಜಂ ಆಗಲೀ, ಬಂಡವಾಳಶಾಹಿಯಾಗಲೀ ಅಲ್ಲ, ಅದು ನಮ್ಮ ಅವಿವೇಕ (ದಡ್ಡತನ), ನಮ್ಮ ಆಧ್ಯಾತ್ಮಿಕ ಕುರುಡುತನ, ನಮ್ಮ ಅಧಿಕಾರಶಾಹಿ ಪ್ರೇಮ, ದಬ್ಬಾಳಿಕೆಯ ದುರಾಸೆಗಳ ವಿರುದ್ಧ ಎಂಬುದು.

ನಮ್ಮ ದೇಶ ಬಲಪಡಿಸಬೇಕಾದರೆ ನಾವೇನು ಮಾಡಬೇಕು ? ಎಂಬ ಬಗ್ಗೆಯೂ ಡಾ. ರಾಧಾಕೃಷ್ಣನ್‌ರು ತುಂಬಾ ಕಳಕಳಿಯಿಂದ ತಿಳಿಸಿದ್ದಾರೆ. 'We can strengthen our nation only if we are able to abolish all man-made distinctions and if we coalesce in to homogeneous community and stand together as one nation'.[೧೨೬] ಮಾನವ ನಿರ್ಮಿತ ಭೇದಗಳನ್ನು ಅಳಿಸಿ ಹಾಕಿದರೆ, ಒಂದೇ

---

೧೨೩. The present crisis of Faith, p. 121

೧೨೪. True knowledge, p. 11

೧೨೫. The Present Crisis of Faith, p. 13

೧೨೬. Living with a purpose p. 45

ಸಮುದಾಯದವರಂತೆ ಆತ್ಮೀಯವಾಗಿ ಒಂದುಗೂಡಿದರೆ, ರಾಷ್ಟ್ರದವರಾಗಿ ಒಗ್ಗೂಡಿದರೆ ಮಾತ್ರ ನಾವು ನಮ್ಮ ದೇಶವನ್ನು ಬಲಪಡಿಸಬಲ್ಲೆವು ಎಂದು ಅವರು ಅರುಹಿದ್ದಾರೆ.

ಇಂದು ನಮ್ಮ ದೇಶದ ನೇತಾರರೂ, ಧುರೀಣರೂ ಅಧಿಕಾರಕ್ಕಾಗಿ ಕಚ್ಚಾಡದೇ ಅವರು ಹೋರಾಡಬೇಕಾದುದು, 'We have to strugle against poverty and disease illiteracy and unemployment we have to wage a long fight against that darkness in men's minds.[೧೨೭] ಅಂದರೆ ನಾವು ಹೋರಾಟ ಮಾಡಬೇಕಾಗಿರುವುದು ಬಡತನ-ರೋಗಗಳ ವಿರುದ್ಧ, ಅನಕ್ಷರತೆ-ನಿರುದ್ಯೋಗಿಗಳ ವಿರುದ್ಧ, ಜನತೆಯ ಮನಸ್ಸುಗಳಲ್ಲಿ ತುಂಬಿರುವ ಗಾಢಾಂಧಕಾರದ ವಿರುದ್ಧ, ನಾವು ಸುದೀರ್ಘ ಹೋರಾಟದ ಪಣ ತೊಡಬೇಕಿದೆ ಎಂದು ತಿಳಿಸುತ್ತಾರೆ.

ಇದಕ್ಕಾಗಿ ನಮ್ಮ ದೇಶಕ್ಕೆ ಬೇಕಾಗಿರುವವರು, 'We require scholars, scientists and technicians to fight the battle against poverty, unemployment, hunger, disease and human degradation.[೧೨೮] ಜಾಣರು, ವಿಜ್ಞಾನಿಗಳು, ತಂತ್ರಜ್ಞಾನಿಗಳು, ಇವರು ಬಡತನ, ನಿರುದ್ಯೋಗ, ಹಸಿವು, ರೋಗ ಮತ್ತು ಅವನತಿಗಿಳಿಯುತ್ತಿರುವ ಮಾನವೀಯತೆಗಳ ವಿರುದ್ಧ ಹೋರಾಡಬೇಕಾಗಿದೆ ಎಂದು ತಿಳಿಸುತ್ತಾರೆ.

---

೧೨೭. True knowledge, p. 26

೧೨೮. Ibid, p. 32

# ೧೧. ಹೊಸ ಜಾಗತಿಕ ಸಮಾಜ (World Society)

ಡಾ. ರಾಧಾಕೃಷ್ಣನ್‌ರು ತತ್ತ್ವಜ್ಞಾನಿಯಾಗಿ ಪ್ರಪಂಚವೇ ನನ್ನ ಮನೆ, ಮಾನವ ಕುಲವೇ ನನ್ನ ಕುಟುಂಬ ಎಂಬ ಭಾವವನ್ನು ತಾಳಿದವರು. ಅದಕ್ಕಾಗಿ ಹಗಲಿರುಳೂ ಶ್ರಮಿಸಿದವರು. ಮಾನವಕುಲದ ಸ್ಥಿತಿ-ಗತಿಗಳನ್ನು ಕುರಿತು ಕಳಕಳಿ ತಾಳಿದ ಮಹಾನುಭಾವರವರು. ಅವರು ಹೇಳುತ್ತಾರೆ, 'It is truism to say that mankind is today in the midst of one of the greatest crises in history'.[೧೨೯] ಮಾನವ ಕುಲವು ಇತಿಹಾಸದಲ್ಲಿಯೇ ಇಂದು ಬಹು ದೊಡ್ಡ ಬಿಕ್ಕಟ್ಟಿನ ಸಂಧಿಗ್ಧತೆಯಲ್ಲಿ ಸಿಲುಕಿದೆ. ಎಲ್ಲೆಡೆಯಲ್ಲಿ ದ್ವೇಷ, ಅಸೂಯೆ, ಕ್ರೋಧ, ಹಿಂಸೆ, ಅಸಹನೆ, ಕ್ರೌರ್ಯ ಇವುಗಳ ತಾಕಲಾಟದಲ್ಲಿ ಜನತೆ ಹೊಸದನ್ನು ಬಯಸುತ್ತಿದೆ. ಜನತೆಯ ಮನಸ್ಸು ಮತ್ತು ಹೃದಯಗಳಲ್ಲಿ ಹೊರಗೆ ಕಾಣದಂತೆ, ಆಂತರಿಕವಾಗಿಯೇ ಒಂದು ಜಾಗತಿಕ ಸಮಾಜದ ಕಲ್ಪನೆ ಗೋಚರವಾಗತೊಡಗಿದೆ ಎನ್ನುತ್ತಾರೆ. 'A new world society is gradually emerging. It is growing quietly, imperceptibly in the minds and hearts of men.'[೧೩೦]

ಇಂದು ಇಡೀ ಮಾನವ ಜನಾಂಗದ ಭವಿಷ್ಯತ್ತಿನ ಬಗ್ಗೆ ಯಾರಲ್ಲಿ ಅರಿವುಂಟಾಗಿದೆಯೋ ಅವರೆಲ್ಲ ಒಕ್ಕಟ್ಟು-ಏಕತೆ-ಉಳಿಯುವಿಕೆಗಾಗಿ ಹಂಬಲಿಸುತ್ತಿದ್ದಾರೆ. ಇಂದು ಪೌರ್ವಾತ್ಯ -ಪಾಶ್ಚಿಮಾತ್ಯ ಎಂಬುದು ಬೇರೆ ಬೇರೆ ಸಂಸ್ಕೃತಿಗಳಾಗಿ ಉಳಿದಿಲ್ಲ. ಅದನ್ನು ಡಾ. ರಾಧಾಕೃಷ್ಣನ್ ಹೀಗೆ ತಿಳಿಸುತ್ತಾರೆ. 'East and West are relative terms. They are geographical expressions and do not represent cultural types'.[೧೩೧]

ಪೂರ್ವ-ಪಶ್ಚಿಮಗಳೆಂಬುವು ಸಂಬಂಧ ಸೂಚಕಪದಗಳಾಗಿವೆ. ಅವು ಭೌಗೋಲಿಕ ವಿವರಣೆಗಳು ಮಾತ್ರ ಎಂದು ತಿಳಿಸುತ್ತಾರೆ. ಇಡೀ ಪೃಥ್ವಿ ಒಂದು ಎಂದು ಅರಿತು, ಇಡೀ ಮಾನವ ಕುಲ, ಮಾನವರು ಮೂಲಭೂತವಾಗಿ ಒಂದೇ. ಅವರೆಲ್ಲರಲ್ಲಿ ಒಂದೇ ಹೃದಯ-ಭಾವನೆಗಳಿವೆ.

---

೧೨೯. The Present Crisis of Faith, p. 9

೧೩೦. Religion in a changing world, 1967, p.15

೧೩೧. Ibid, p. 17

`we need not merely a closer contact East and West but a closer union, a meeting of minds and a union of hearts'.[೧೩೧೮]

ಇಂದು ವಿಜ್ಞಾನದ ಬೆಳವಣಿಗೆಯಿಂದಾಗಿ ಇಡೀ ಪ್ರಪಂಚವೇ ಎಲ್ಲರಿಗೂ ಹತ್ತಿರವಾಗಿದೆ. ಪೃಥ್ವಿಯ ಮೇಲಿರುವ ಜನ ಹತ್ತಿರವಾಗುತ್ತಿದ್ದಾರೆ. ಇದರಿಂದಾಗಿ ಅಂತರ್‌ರಾಷ್ಟ್ರೀಯ ಸಮಾಜವೊಂದು ಮೂಡಿ ಬರತೊಡಗಿದೆ. ಅಣು ಯುದ್ಧದ ಭಯದಿಂದಾಗಿ ಇಡೀ ಪ್ರಪಂಚವು ವಿನಾಶದ ಅಂಚಿಗೆ ಬಂದು ನಿಂತಿದೆ. ಉಳಿದರೆ ನಾವೆಲ್ಲ ಒಟ್ಟಾಗಿ ಉಳಿಯಬೇಕು. ಅಳಿದರೆ ಎಲ್ಲರೂ ಒಟ್ಟಾಗಿ ಅಳಿಯಬೇಕು.

ಮಾನವಕುಲ ಹಿಂದೆಂದಿಗಿಂತಲೂ ಇಂದು ಹೆಚ್ಚು ಅಪಾಯದ ಅಂಚಿನಲ್ಲಿದೆ. ಡಾ. ರಾಧಾಕೃಷ್ಣನ್ ಈ ಕುರಿತು ಹೇಳುತ್ತಾರೆ. 'We live in a dangerous world where nations still seek their ends by the unashamed use of forces, still seek to enforce injustice by blood and steel'.[೧೩೨] ನಾವಿಂದು ಭಯಾನಕವಾದ ಜಗತ್ತಿನಲ್ಲಿದೇವೆ. ಇನ್ನೂ ರಾಷ್ಟ್ರಗಳು ನಾಚಿಕೆಯಿಲ್ಲದೇ ಸೈನ್ಯ ಶಕ್ತಿಯ ಬಲಪ್ರಯೋಗದಿಂದ ಅನ್ಯಾಯ ಮಾರ್ಗದಲ್ಲಿ ರಕ್ತ ಹೀರುತ್ತಿವೆ. 'ಶಸ್ತ್ರಸಜ್ಜಿತವಾದ ಜಗತ್ತು ಎರಡು ಎರಡು ಪರಸ್ಪರ ಶಿಬಿರಗಳಾಗಿ ಒಡೆದು ನಿಂತಿದೆ. ಒಂದರ ಮೇಲೊಂದು ದಾಳಿ ನಡೆಸಲು ಸಿದ್ಧವಾಗುತ್ತಿದೆ. ಈ ಭೀತಿ ನಮ್ಮ ಆಲೋಚನೆಗಳನ್ನು ಅಂತರ್ಭಾವಗಳನ್ನು ಆರಿಸಿ ನಿಂತಿದೆ. ಮುಂದೆ ಹೇಗೋ ಅನ್ನುವ ಚಿಂತೆ ನಮ್ಮನ್ನು ಕಾಡುತ್ತಿದೆ'.[೧೩೩]

ಈ ಹಿಂದೆ ಆಗಿರುವ ಎರಡು ಮಹಾಯುದ್ಧಗಳ ಭೀಕರ ಪರಿಣಾಮಗಳನ್ನು ಡಾ. ರಾಧಾಕೃಷ್ಣನ್‌ರು ನಮ್ಮ ಕಣ್ಮುಂದೆ ಬಿಚ್ಚಿಡುತ್ತಾರೆ. ಮೊದಲ ಮಹಾಯುದ್ಧದಲ್ಲಿ ಒಂದು ಕೋಟಿ (ನೂರು ಲಕ್ಷ) ಜನ ಕೊಲ್ಲಲ್ಪಟ್ಟರು. ಅದರಲ್ಲಿ ೯೫ ಲಕ್ಷ ಸೈನಿಕರು, ೫ ಲಕ್ಷ ನಾಗರಿಕರು, ಅದೇ ರೀತಿ ಎರಡನೇ ಜಾಗತಿಕ ಮಹಾಯುದ್ಧದಲ್ಲಿ ಐದು ಕೋಟಿ (ಐದು ನೂರು ಲಕ್ಷ) ಜನ ಕೊಲ್ಲಲ್ಪಟ್ಟರು. ಅದರಲ್ಲಿ ಪ್ರತಿಶತ ೫೨ರಷ್ಟು ಸೈನಿಕರು, ೪೮ರಷ್ಟು ನಾಗರಿಕರು ಸತ್ತರು. ಇದಲ್ಲದೆ ಇನ್ನೂ ನೂರಾರು ಯುದ್ಧಗಳು ಪ್ರಪಂಚದ ತುಂಬ ನಡೆಯುತ್ತಲೇ ಇವೆ.

ಇಪ್ಪತ್ತನೆಯ ಶತಮಾನದಈ ಕೊನೆಯ ಭಾಗದಲ್ಲಿರುವ ನಾಗರಿಕ ಜನಾಂಗ ಇಪ್ಪತ್ತೊಂದರಲ್ಲಿ ಹೇಗಿರಬಹುದು? ಇದಕ್ಕೆ ಉತ್ತರವೇ ಇಲ್ಲದಂತಾಗಿದೆ. ಈ ಎಲ್ಲ

---

೧೩೧೮. East and West : Some Reflections, p. 130-131

೧೩೨. True knowledge,p. 102

೧೩೩. ಮತಧರ್ಮದ ಪುನರುಜ್ಜೀವನ, ಪು. ೧

ದುರಂತಗಳಿಗೆಲ್ಲ ಕಾರಣ ವಿಕೃತ ಮನಸ್ಸಿನ, ಅಧಿಕಾರ ದಾಹದ ರಾಜಕಾರಣಿಗಳು, ಆಯಾ ದೇಶಗಳ ಸ್ವಾರ್ಥ-ಹಿಂಸಾ ಪ್ರವೃತ್ತಿಯ ನೇತಾರರು.

ಆದಾಗ್ಯೂ ಇಂದು ನಿರಾಶರಾಗಬೇಕಿಲ್ಲವೆಂದು ಡಾ. ರಾಧಾಕೃಷ್ಣನ್ ತಿಳಿಸುತ್ತ 'World Community' ಜಾಗತಿಕವಾಗಿ ಜಾಗತಿಕ ಸಮುದಾಯ ಒಂದು ರೂಪುಗೊಳ್ಳುತ್ತಿದೆ ಎಂದು ಭರವಸೆ ನೀಡುತ್ತಾರೆ. 'Our aim is to establish a world community based on a universal moral order. It is possible only with a Comittment to the ideal and practice of democracy based on the dignity of the Individual.'[೧೩೪] ವಿಶ್ವ ನೈತಿಕ ನಿಯಮದ ಮೇಲೆ ಜಾಗತಿಕ (ಸಮೂಹ) ಸಂಘಟನೆಯನ್ನು ಸ್ಥಾಪಿಸುವುದು ನಮ್ಮ ಗುರಿಯಾಗಬೇಕು. ವ್ಯಕ್ತಿ ಗೌರವದ ತಳಹದಿಯ ಮೇಲೆ ಪ್ರಜಾತಂತ್ರದ ಆಡಳಿತದ ಆಚರಣೆಯ ಆದರ್ಶಕ್ಕೆ ನಾವು ಕಟಿಬದ್ಧರಾದರೆ ಮಾತ್ರ ಇದು ಸಾಧ್ಯವೆಂಬುದನ್ನು ತಿಳಿಸುತ್ತಾರೆ.

ಕಮ್ಯುನಿಜಂ ದೇಶಗಳೂ ಕೂಡ ಈ ದಿಸೆಯಲ್ಲಿ ಸಾವಕಾಶವಾಗಿ ಹೆಜ್ಜೆಯನ್ನಿಡತೊಡಗಿವೆಯಂಬುದನ್ನು ಡಾ. ರಾಧಾಕೃಷ್ಣನ್‌ರು ತಿಳಿಸುತ್ತಾರೆ, The Communist Society is getting gradually democratized. The Soviet Union has passed through stages of development. It is capable of co-operating co-existence.'[೧೩೫]

ಕಮ್ಯುನಿಜಂ ಸಮಾಜವೂ ಕೂಡ ಸಾವಕಾಶವಾಗಿ ಪರಿವರ್ತನಗೊಳ್ಳುತ್ತಿದೆ. ಇತ್ತೀಚೆಗೆ ರಶಿಯದ ಕಮ್ಯುನಿಸ್ಟ ಧುರೀಣ ಶ್ರೀಗೋರ್ಬಚೇವ ಅವರು ಶಾಂತಿದೂತರಾಗಿ ವಿಶ್ವದ ಎಲ್ಲ ರಾಷ್ಟ್ರಗಳನ್ನು ತಮ್ಮ ಸ್ನೇಹ-ಸೌಹಾರ್ದತೆಯಿಂದ ಅಪ್ಪಿಕೊಳ್ಳುತ್ತಿರುವುದು, ನಿಶ್ಯಸ್ತ್ರೀಕರಣದತ್ತ ದಾಪುಗಾಲು ಹಾಕುತ್ತಿರುವದು ಮಾನವಕುಲಕ್ಕೆ ಹಿತವೆನಿಸುವ ಸಂಗತಿಯಾಗಿದೆ.

---

೧೩೪. Religion in a changing world p. 163

೧೩೫. Ibid, p. 169

# ೧೨. ವಿಶ್ವಶಾಂತಿ

ಪ್ರಪಂಚಕ್ಕೆ ಇಂದು ಬೇಕಾಗಿರುವುದು ಶಾಂತಿ. ಈ ಶಾಂತಿಗಾಗಿ ನಾವು ಮಾಡಬೇಕಾದುದೇನು ಎಂಬುದನ್ನು ಡಾ. ರಾಧಾಕೃಷ್ಣನ್‌ರು ಸೂಚಿಸುತ್ತಾರೆ. 'ಪ್ರಪಂಚದಲ್ಲಿ ಶಾಶ್ವತವಾಗಿ ಶಾಂತಿಯು ನೆಲೆಸಬೇಕೆಂಬ ಅಭಿಲಾಷೆಯು ಇಂದು .ತೀವ್ರವಾಗಿದೆ. ಅದಕ್ಕಾಗಿ ಕರಾರು ಪತ್ರಗಳ ಮೇಲೆ ಕರಾರು ಪತ್ರಗಳು! ರುಜುಗಳ ಮೇಲೆ ರುಜುಗಳು! ಆರ್ಥಿಕ ಒಪ್ಪಂದಗಳ ಪತ್ರಗಳ ಮೇಲೆಒಪ್ಪಂದ ಪತ್ರಗಳು! ಇವುಗಳ ಹಾರಾಟದಿಂದಲೇ ಪ್ರಪಂಚದಲ್ಲಿ ಶಾಶ್ವತ ಶಾಂತಿ ರಕ್ಷಣೆಯಾಗುವುದು ಶಕ್ಯವಿಲ್ಲ. ಇದಕ್ಕಿಂತ ಅವೆರಡನ್ನೂ ಉಪಯೋಗಿಸಿಕೊಂಡರೆ ಪ್ರಪಂಚದಲ್ಲಿ ಶಾಶ್ವತ ಶಾಂತಿಯು ನೆಲೆಸುವಂತಾದೀತು. ಮೊದಲನೆಯದಾಗಿ ನಾನಾ ಜನಾಂಗಗಳ ಸುಸಂಸ್ಕೃತರಾದ ಮೇಧಾವಿಗಳು ಒಟ್ಟಿಗೆ ಕಲೆತು ಶಾಂತಿ ರಕ್ಷಣೆಯಾಗಲು ಅನುಸರಿಸಬೇಕಾದ ಮಾರ್ಗಗಳನ್ನು ಸ್ನೇಹ-ಸೌಹಾರ್ದತೆಗಳಿಂದ, ತಮ್ಮ ಆತ್ಮ ಸಾಕ್ಷಿಗನುಸಾರವಾಗಿ ನಿರ್ಧರಿಸುವುದು. ಎರಡನೆಯದಾಗಿ ಜನಾಂಗಗಳು ಪರಸ್ಪರವಾಗಿ ಆಸ್ಥೆಯಿಂದ ಜ್ಞಾನಾನುಭವಗಳನ್ನೂ, ಧ್ಯೇಯಗಳನ್ನೂ ಇನ್ನೂ ಹೆಚ್ಚು ಹೆಚ್ಚಾಗಿ ವಿನಿಮಯ ಮಾಡಿಕೊಳ್ಳುವುದು. ಶಾಂತಿ ರಕ್ಷಣೆಯು ಕರಾರು ಕಾಗದ ಪತ್ರಗಳಿಗಿಂತ ಹೆಚ್ಚಾಗಿ ಇವೆರಡರ ಆಧಾರದ ಮೇಲೆ ನಿಂತಿದೆ.'[೧೩೬]

ಇದಲ್ಲದೇ 'ಶಾಂತಿವಾದವೆನ್ನುವುದು ರಾಷ್ಟ್ರ ಪರಿಷತ್ತಿನಿಂದ ಕೊಳ್ಳಬಹುದಾದ ಪದಾರ್ಥವಲ್ಲ. ಮಾನವಕೋಟಿಯ ನೈತಿಕ ಔದಾಸೀನ್ಯ ಹರಿಯಬೇಕು. ಜನಜಂಗುಳಿಯ ದಬ್ಬಾಳಿಕೆಯನ್ನು ಎದುರಿಸುವ ಸಾಮರ್ಥ್ಯವನ್ನು ಪಡೆದುಕೊಳ್ಳಬೇಕು. ಶಾಂತಿವಾದನ್ನು ನಮ್ಮ ದೃಢ ವಿಶ್ವಾಸವಾಗಿ ಪರಿವರ್ತನೆ ಮಾಡಬೇಕು. ಅದರಂತೆ ಬಾಳಲು ಅಗತ್ಯವಾದ ಮನೋಧರ್ಮ, ಧೈರ್ಯ ಎರಡನ್ನೂ ಪಡೆಯಬೇಕು ಎಂದರೆ ಬುದ್ಧಿ ಮಾತ್ರವಲ್ಲ, ನಮ್ಮ ಇಡೀ ಚೇತನವನ್ನು ಬಳಸಬೇಕು'[೧೩೭] ಎಂದು ತಿಳಿಯಪಡಿಸುತ್ತಾರೆ.

ಇಂದು ಇಡೀ ಪ್ರಪಂಚದ ಆತ್ಮಾನುಭಾವಿಗಳು, ಮಾನವೀಯ ಪ್ರಜ್ಞೆಯುಳ್ಳವರು ಮೂರು ಪ್ರಮುಖ ಕಾರ್ಯಗಳನ್ನು ಕೈಕೊಳ್ಳಬೇಕಿದೆಯೆಂದು

---

೧೩೬. ಕಲ್ಕಿ ಅಥವಾ ನಾಗರಿಕತೆಯ ಭವಿಷ್ಯ. ಪು. ೧೫೨, ೧೫೩
೧೩೭. ಧರ್ಮದಲ್ಲಿ ಪೂರ್ವ ಮತ್ತು ಪಶ್ಚಿಮ, ಪು. ೭೫

ಡಾ. ರಾಧಾಕೃಷ್ಣನ್‌ರು ಹೇಳುತ್ತ "The task of humanity is three fold; to make the enemy in to a friend, to make the wicked man in to a righteous man, to make the illeterate in to a learned man'.[೧೩೮] ಅಂದರೆ ವೈರಿಯನ್ನು ಮಿತ್ರನನ್ನಾಗಿ, ಕ್ರೂರಿಯನ್ನು ಸದ್ಗುಣಿಯನ್ನಾಗಿ ಅನಕ್ಷರಸ್ಥನನ್ನು ಜ್ಞಾನಿಯನ್ನಾಗಿ ಮಾಡುವ ಬಹು ದೊಡ್ಡ ಕಾರ್ಯವಾಗಬೇಕಾಗಿದೆ.

ಇದಲ್ಲದೇ **'ನಾವು ಇಂದು ಎಷ್ಟು ದರಿದ್ರರಾಗಿದ್ದೇವೆಂದರೆ ಆತ್ಮದ ನಿಧಿಯನ್ನು ನಾವು ಗುರುತಿಸಲಾರೆವು.** ನಮ್ಮ ಜಾಗೃತ ಜೀವನದ ಗಡಿಬಿಡಿಯಲ್ಲಿ ನಮ್ಮ ಒಳಜೀವನದ ಸಣ್ಣ ದನಿಯ ಕೂಗೂ ನಮಗೆ ಕೇಳಿಸುವುದಿಲ್ಲ'[೧೩೯] ಎಂದು ತಿಳಿಸುತ್ತ, ನಮ್ಮ ಬದುಕಿನ ಗುರಿಯೆಡೆಗೆ ನಮ್ಮನ್ನು ಎಚ್ಚರಿಸುತ್ತಾರೆ. ಇಂದಿನ ಪ್ರಪಂಚದ ಜನಾಂಗಗಳಿಗೆ ಅಗತ್ಯವಾಗಿ ಬೇಕಾಗಿರುವುದರ ಕಡೆಗೆ ನಮ್ಮ ಗಮನ ಸೆಳೆಯುತ್ತಾರೆ. 'ಇಂದಿನ ಜಗತ್ತಿಗೆ ಅಗತ್ಯವಾಗಿ ಬೇಕಾಗಿರುವುದು ಆಧ್ಯಾತ್ಮಿಕ ಜಾಗೃತಿ, ಮತಧರ್ಮದ ಪುನರುಜ್ಜೀವನ (Recovery of Faith) ಇದು ಸಾಮಾಜಿಕ, ರಾಜಕೀಯ ಅಥವಾ ಆರ್ಥಿಕ ಪುನರ್ವ್ಯವಸ್ಥೆಗಿಂತಲೂ ಆಳವಾದ ಅಗತ್ಯ'[೧೪೦] ಎಂದು ಮನವರಿಕೆ ಮಾಡಿಕೊಡುತ್ತಾರೆ.

ಇಂದು ನಾವೆಲ್ಲರೂ ನಮ್ಮ ಪರಸ್ಪರ ಭಿನ್ನಾಭಿಪ್ರಾಯಗಳನ್ನು ಮರೆತು ಜಗಳಗಳನ್ನು ತೊರೆದು, ಒಂದೇ ಒಂದಾಗಿರುವ ಪರಮ ಚೇತನದಲ್ಲಿ ನಂಬಿಕೆ ಇಟ್ಟು ನಾವೆಲ್ಲರೂ ಸಹೋದರರು, ದೇವರ ಮಕ್ಕಳು ಎಂಬುದನ್ನು ನಮ್ಮ ಮನಸ್ಸುಗಳಲ್ಲಿ ತುಂಬಿಕೊಳ್ಳಬೇಕೆಂಬುದನ್ನು ಒತ್ತಿ ಒತ್ತಿ ಹೇಳುತ್ತಾರೆ ಡಾ. ರಾಧಾಕೃಷ್ಣನ್‌ರು "The lesson we have to instal in to minds. If we are to learn from the past, the one lesson we need is forget differences, do not quarrel with one another, believe in the one supreme and look upon all people as children of that supreme one'.[೧೪೧]

ಈ ರೀತಿಯಾಗಿ ಡಾ. ರಾಧಾಕೃಷ್ಣನ್‌ರು ತಮ್ಮ ಬಾಳಿನಾದ್ಯಂತ ಮಾನವಕುಲದ ಏಕತೆಗಾಗಿ, ಪೌರ್ವಾತ್ಯ-ಪಾಶ್ಚಿಮಾತ್ಯ ನಾಗರಿಕತೆ-ಸಂಸ್ಕೃತಿಗಳ ಕೊಂಡಿಯಾಗಿ ಕಾರ್ಯನಿರ್ವಹಿಸಿ, ಪೃಥ್ವಿಯ ಜನರನ್ನು ಆಧ್ಯಾತ್ಮದ, ದೈವೀ

---

೧೩೮. The Creative Life, p. 55

೧೩೯. ಧರ್ಮದಲ್ಲಿ ಪೂರ್ವ ಮತ್ತು ಪಶ್ಚಿಮ, ಪು, ೧೧೪

೧೪೦. ಮತ ಧರ್ಮದ ಪುನರುಜ್ಜೀವನ, ಪು. ೧

೧೪೧. Religion in a changing world P-11

ಚೇತನದ ಬೆಸುಗೆ ಹಾಕಲು ಪ್ರಯತ್ನಿಸಿದವರು. ಅವರ ವಿಚಾರಗಳು ಇಂದಿಗೂ ಮುಂದೆಯೂ, ಮಾನವಕುಲ ಬದುಕಿರುವವರೆಗೂ ಉಳಿಯುವ ಶಾಶ್ವತ ಮೌಲ್ಯಗಳಾಗಿವೆ. ಅವರು ಬರೆದ ಗ್ರಂಥಗಳು, ಅವರ ಲೇಖನಗಳು ಉಪನ್ಯಾಸಗಳು ಅಪಾರ.

ಡಾ. ರಾಧಾಕೃಷ್ಣನ್‌ರು ಒಬ್ಬ ಶಿಕ್ಷಕ-ತತ್ತ್ವಜ್ಞಾನಿಯೆಂಬುದು ನಮಗೆಲ್ಲ ಹೆಮ್ಮೆ. ಇಪ್ಪತ್ತನೆಯ ಶತಮಾನದಲ್ಲಿ. ಭಾರತ ಪ್ರಪಂಚಕ್ಕೆ ನೀಡಿದ ಅನರ್ಘ್ಯ ರತ್ನಗಳಲ್ಲಿ ಅಮೂಲ್ಯ ರತ್ನವಾಗಿದ್ದಾರೆ. ಅವರ ವಿಚಾರಗಳು ಭಾರತೀಯರಾದ ನಮ್ಮನ್ನು ಸದಾಕಾಲ ಎಚ್ಚರಿಸುತ್ತಿರಲಿ, ಸ್ನೇಹ-ಸೌಹಾರ್ದ-ಬಂಧುತ್ವಗಳು ನಮ್ಮಲ್ಲಿ ಒಡಮೂಡಲಿ, ಸಾಗರೋಪಮವಾಗಿರುವ ಅವರ ತತ್ತ್ವಜ್ಞಾನದ ವಿಚಾರಗಳನ್ನು ಬೊಗಸೆಯಲ್ಲಿ ಹಿಡಿದು ತೋರಿಸುವ ಪ್ರಯತ್ನ ಇಲ್ಲಿ ಮಾಡಲಾಗಿದೆ.

ಕೊನೆಯದಾಗಿ ಡಾ. ರಾಧಾಕೃಷ್ಣನ್‌ರ ಈ ದಿವ್ಯ ಸಂದೇಶವನ್ನು ಆಲಿಸೋಣ. ಅನವರತ ನೆನಪಿಡೋಣ, ಚಿಂತನ ಮಾಡೋಣ. ಆ ದಿಸೆಯಲ್ಲಿ ಕಾರ್ಯ ಪ್ರವೃತ್ತರಾಗೋಣ. 'ನಾವು ಸತ್ಯದ ಸೈನಿಕರಾಗೋಣ; ವಿಶ್ವವನ್ನು ತಲೆಕೆಳಗು ಮಾಡೋಣ, ಭೂಮಿಯ ಮೇಲೆ ದೇವರ ರಾಜ್ಯ ಪ್ರತಿಷ್ಠಿತವಾಗುವವರೆಗೆ ಸೈನಿಕರಾಗೋಣ.'[೧೪೨]

'The purpose of life is not enjoyment of the world but the education of the soul'. [೧೪೩]

ಜೀವನ ಉದ್ದೇಶವು ಭೌತಿಕ ಭೋಗ ಭಾಗ್ಯಗಳಲ್ಲಿಯೇ ಇಲ್ಲ, ಅದು ಆತ್ಮಕ್ಕೆ ಯೋಗ್ಯವಾದ ಶಿಕ್ಷಣ ಕೊಡುವುದರಲ್ಲಿದೆ. ಮಾನವನು ಸದುವಿನಯ, ಸದಾಚಾರ ಸಂಪನ್ನ, ಸುಸಂಸ್ಕೃತನಾಗಬೇಕು.

---

೧೪೨. ಧರ್ಮದಲ್ಲಿ ಪೂರ್ವ ಮತ್ತು ಪಶ್ಚಿಮ, ಪು. ೧೦೫

೧೪೩. This is my Philosophy, p. 134 Edt. Whid Burnett

# ೧೩ ಗ್ರಂಥ ಋಣ

('ಡಾ. ರಾಧಾಕೃಷ್ಣನ್‌ರ ಜೀವನ-ಸಾಧನೆ-ವಿಚಾರಗಳು' ಕೃತಿಗೆ ಆಧಾರಗಳು)

## A) Books written by S. Radhakrishan

ಡಾ. ರಾಧಾಕೃಷ್ಣನ್‌ರು ಬರೆದ ಕೃತಿಗಳು


1. *The Philosophy of Rabindranath Tagore (1918)*
2. *The reign of Religion in contemporary Philosophy (1920)*
3. *Indian Philosophy Volume-I (1923)*
4. *Indian Philosophy Volume-II (1927)*
5. *The Hindu View of Life (1927)*
6. *The Religion we need (1928)*
7. *Kalki or the Future of Civilization (1929)*
8. *An Idealistic view of Life (1932)*
9. *East and West in Religion (1933)*
10. *The world's Unborn Soul (1936)*
11. *The Heart of Hindusthan (1936)*
12. *Freedom and Culture (1936)*
13. *Eastern Religions and Western Thought (1939)*
14. *Education, politics and war (1944)*
15. *India and China (1944)*
16. *Is this Peace ? (1945)*
17. *Religion and Society (1948)*
18. *Goutama the Buddha (1949)*
19. *Great Indians (1949)*
20. *Occasional Speeches and writings (1952)*
21. *Recovery of Faith (1955)*
22. *The Revolutionary Bhoodan yajna (1955)*
23. *East and West : Some Reflections (1956)*
24. *Fellowship of the spirit (1961)*
25. *On Nehru (1965)*
26. *President Radhakrishnan's Speeches and writings (1964-67)*
27. *Religion in a changing world (1967)*
28. *Religion and culture (1968)*
29. *Religion present crisis of faith (1970)*
30. *Our Heritage(1973)*
31. *The Creative Life (1975)*

32. *Living with a purpose (1977)*
33. *True knowldge (1978)*
34. *Indian Religions (1979)*
35. *Towards a New world (?)*

**B) 36 & 37 Occasional Speeches and writings Vol. I & II**

**C) Works Translated by S. Radhakrishnan**

*(ರಾಧಾಕೃಷ್ಣನ್‌ರು ಅನುವಾದಿಸಿದ ಗ್ರಂಥಗಳು)*

1. *The Bhagavadgita (1948)*
2. *The Dhammapada (1950)*
3. *The Principal Upanishads (1953)*
4. *The Brahma Sutra: The Philosophy of spiritual Life (1960)*

**D) Articles Written by S. Radhakrishnan**

**(ರಾಧಾಕೃಷ್ಣನ್‌ರು ಬರೆದ ಲೇಖಗಳು)**

1. *The Ethics of Bhagavadgita and Kant (1911)*
2. *The Vedanta Philosophy and the Doctrine of maya (1914)*
3. *The Religion and Life (1916)*
4. *The Role of Philosophy in the History of Civilization (1927)*
5. *The doctrine of maya: Some problems (1927)*
6. *My Search for truth (1937)*
7. *Hinduism and the West (1941)*
8. *UNESCO and World Revolution (1950)*
9. *The Religion of the spirit and the world's Need (1952)*
10. *Reply to critics (1952)*
11. *This is my Pholosophy' (?)*
12. *Moral Ethics in Vedanta (1910)*
13. *The spirit in man*
14. *The Religion we Need (1963)*

**E) Works Edited by S. Radhakrishnan**

**(ರಾಧಾಕೃಷ್ಣನ್‌ರು ಸಂಪಾದಿಸಿದ ಕೃತಿಗಳು)**

1. *Contemporary Indian Philosophy (1936) with J.H. Murihed 4th Edn. (1966)*
2. *Mahatma Gandhi: Essays and Reflection on his life and work (1939)*
3. *History of Philosophy, Estern and Western (2 Vols 1952)*
4. *Essays in Philosophy : (Presented in his hounour) with A. R. Wadia (1954)*
5. *A Source book in Indian Philosophy with Moore Charles A.*

(1957)

6. *The Concept of man : A study in Contemporary Philosophy with P. T. Raju (1960)*
7. *A Garland of Homage from some who knew Him well with Basant Kumar Mallik (1961)*
8. *Mahatma Gandhi-100 years with R. R. Diwakar and Swaminathan K. (1968)*

**F) ಡಾ. ರಾಧಾಕೃಷ್ಣನ್‌ರ ಕನ್ನಡ ಅನುವಾದಿತ ಕೃತಿಗಳು**

೧. ಧರ್ಮದಲ್ಲಿ ಪೂರ್ವ ಮತ್ತು ಪಶ್ಚಿಮ
ಅನು : ಎಸ್. ಕೆ. ರಾಮಚಂದ್ರರಾವ್
೨. ಧರ್ಮ ಮತ್ತು ಸಮಾಜ ಅನು : ಎ. ಎಲ್. ಶಿವರುದ್ರಪ್ಪ
೩. ಪ್ರಾಚ್ಯ ಮತ್ತು ಪಾಶ್ಚಾತ್ಯ ಸಂಸ್ಕೃತಿ
ಅನು. : ಪ್ರೊ. ನಿಕ್ಕುಂ ಮತ್ತು ಎನ್. ಎಸ್. ಅನಂತರಂಗಾಚಾರ್
೪. ಮತಧರ್ಮದ ಪುನರುಜ್ಜೀವನ
ಅನು. .ಪ್ರೊ. ಎಂ. ಎ. ಯಮುನಾಚಾರ್ಯ
೫. ಹಿಂದೂ ಜೀವನ ದರ್ಶನ -ಮೈ. ವಿ. ವಿ. ಪ್ರಕಟಣೆ
೬. ಮಹಾತ್ಮಾ ಗಾಂಧಿ ೧೦೦ ವರ್ಷಗಳು:
೭. ಕಲ್ಕಿ ಅಥವಾ ನಾಗರಿಕತೆಯ ಭವಿಷ್ಯ ಸ್ಥಿತಿ
ಅನು. : ಸಿ. ಕೆ. ವೆಂಕಟರಾಮಯ್ಯ
೮. ತತ್ತ್ವಶಾಸ್ತ್ರ : ಪ್ರಾಚ್ಯ ಮತ್ತು ಪಾಶ್ಚಾತ್ಯ ಸಂ. ೧.
ಮೈ. ವಿ.ವಿ. ಪ್ರಕಟಣೆ

**G. ಇತರ ಗ್ರಂಥಗಳು**

1. *Radhakrishnan : Portrait of An Educationist (1967) - Rajendrapal Singh*
2. *Radhakrishnan and Integral Experience (1966) - Arapura J.*
3. *Sarvapalli Radhakrishnan (1966) (Ed.) Datta K. I*
4. *The Philosophy of Radhakrishnan (1952) (Ed.) Schilpp P.A.*
5. *Maya in Radhakrishnan's Thought (1984) - Donald A. Brue*
6. *Education and Ecstasy (1969) - Grorge B. Leonard*
7. *Swami Vivekanand on India and Her Problems (1882) (Ed.) Swami Vivekananda*
8. ನನ್ನ ಕನಸಿನ ಭಾರತ :ಸಂ. ಆರ್. ಕೆ. ಪ್ರಭು

ಅನು. : ಕೆ. ಎಸ್. ನರಸಿಂಹಸ್ವಾಮಿ.

9. ನವೀನ ನಿಬಂಧ ರಚನಾ ಓಂ ಪ್ರಕಾಶ ಸಿಂಹಳ, ದಿಲ್ಲಿ
10. *Encyclopedia of world Biography : Vol IX*
11. ಶಂಕರಾಚಾರ್ಯ ಮತ್ತು ಪ್ರತಿಗಾಮಿತನ (೧೯೮೭)
 - ಡಾ.ಕೆ.ಎಸ್.ಭಗವಾನ್, ಮೈಸೂರು
12. *Religion in the making - A. N. Whitehead*
13. *The life and Letters of Frederic Max Mullar Vol. II*
14. ನಿರಂಜನ ಶರಣೆ ಅಕ್ಕಮಹಾದೇವಿ ವಚನಗಳು :
 ಸಂ. ಪ್ರೊ. ಕಲ್ಯಾಣಮ್ಮ ಲಂಗೋಟಿ
15. ಶ್ರೀ ಕುವೆಂಪು ಅವರ ದೃಷ್ಟಿಯಲ್ಲಿ ಶ್ರೀ ಬಸವೇಶ್ವರರು
 -ಸಂ. ದೇ. ಜವರೇಗೌಡ
16. ಲಿಂಗಾಯತ ಧರ್ಮ ಸಮಾಜ ತತ್ತ್ವಜ್ಞಾನ -ಸಿದ್ಧಣ್ಣ ಲಂಗೋಟಿ
17. ಸ್ವಾಮಿ ವಿವೇಕಾನಂದ ದೇಶಭಕ್ತಿ ಕಲ್ಪನೆ -ಸಿದ್ಧಣ್ಣ ಲಂಗೋಟಿ
18. ಬಸವಣ್ಣನವರ ವಚನಗಳು -ಸಂ. ಫ. ಗು. ಹಳಕಟ್ಟಿ
19. ಕವೀಂದ್ರ ರವೀಂದ್ರರು -ಸ.ಸ. ಮಾಳವಾಡ
20. ರವೀಂದ್ರನಾಥ ಠಾಕೂರ - ಡಾ. ಹಾ. ಮಾ. ನಾಯಕ

## ಪ್ರೊ. ಸಿದ್ಧಣ್ಣ ಲಂಗೋಟಿಯವರು ಬರೆದ
## "ವಿಶ್ವವಿಖ್ಯಾತ ತತ್ತ್ವಜ್ಞಾನಿ ಡಾ. ಸರ್ವಪಲ್ಲಿ ರಾಧಾಕೃಷ್ಣನ್ನರು"
## -ಗ್ರಂಥ ಕುರಿತು ಅಭಿಪ್ರಾಯಗಳು-

೧

'ಮಹಾತ್ಮರಂ ನೆನವುದೆ ಘನ ಮುಕ್ತಿಪದಂ'

"Lives of grat men all remind us, we can make our lives sublime.

- ಎಂಬ ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯರ ಈ ಮಾತುಗಳು, ಮಹಾತ್ಮರನ್ನು ನೆನೆಯಬೇಕು. ಅವರು ಪಡೆದ ಮಹೋನ್ನತ ನಿಲುವನ್ನು, ಆದರ್ಶವನ್ನು ಮೈಗೂಡಿಸಿಕೊಳ್ಳಲು ಪ್ರಯತ್ನಿಸಬೇಕು ಎಂಬುದರತ್ತ ಗಮನಹರಿಸುತ್ತವೆ.

೧೯೮೮ ಸಪ್ಟೆಂಬರ್ ೫ ರಂದು ಡಾ. ರಾಧಾಕೃಷ್ಣನ್‌ರ ಜನ್ಮ ಶತಮಾನೋತ್ಸವದ ನೆನಪಿನಲ್ಲಿ ಶಿಕ್ಷಕರ ದಿನಾಚರಣೆಯನ್ನು ಆಚರಿಸುತ್ತಿರುವ ಈಗಿನ ಸಂದರ್ಭದಲ್ಲಿ ಅನೇಕ ಶಿವ-ಶರಣರ ಜೀವನ ಹಾಗೂ ತತ್ವಗಳನ್ನು ಕುರಿತು ಅನೇಕ ಗ್ರಂಥಗಳನ್ನು ರಚಿಸಿದ ರಾಮದುರ್ಗ ಕಾಲೇಜಿನ ಅಧ್ಯಾಪಕರಾದ ಸಿದ್ಧಣ್ಣ ಲಂಗೋಟಿಯವರು, ಶ್ರೇಷ್ಠ ಶಿಕ್ಷಣ ತಜ್ಞರಾಗಿ, ರಾಷ್ಟ್ರಪತಿಗಳಾಗಿ ರಾಜಕೀಯ ಮುತ್ಸದ್ದಿಯಾಗಿ, ತತ್ವಜ್ಞಾನಿಯಾಗಿ ಇವೆಲ್ಲಕ್ಕೂ ವಿಶ್ವಕುಟುಂಬಿಯಾಗಿ ಹೇಗೆ ಬದುಕನ್ನು ರೂಪಿಸಿಕೊಂಡರೆಂಬುದನ್ನು, ಬೃಹದ್ ಗ್ರಂಥಗಳಲ್ಲಿ, ಉಪನ್ಯಾಸಗಳಲ್ಲಿ ದೇಶ-ವಿದೇಶಗಳ ಸರ್ವ ಮನುಕುಲಕ್ಕೆ ಆ ಜ್ಞಾನದ ನಿಧಿಯನ್ನು ಹೇಗೆ ಹಂಚಿದ್ದಾರೆಂಬುದನ್ನು ಸಾದ್ಯಂತವಾಗಿ ಇಲ್ಲಿ ನಿರೂಪಿಸಲು ಪ್ರಯತ್ನಿಸಿದ್ದಾರೆ.

ಹಿಂದೂ ಧರ್ಮ-ದೇವರು-ವಿಜ್ಞಾನ ಶೈಕ್ಷಣಿಕ ವಿಚಾರ ಹಾಗೂ ಅದರ ಮಾಧ್ಯಮ-ಕೌಟುಂಬಿಕ ಮತ್ತು ಸಾಮಾಜಿಕ ವಿಚಾರ, ಹೊಸ ಜಾಗತಿಕ ಸಮಾಜ ಹಾಗೂ ವಿಶ್ವಶಾಂತಿ ಮೊದಲಾದ ವಿಷಯಗಳ ಕುರಿತು ೮೮ ಪುಟಗಳಲ್ಲಿ ವಿಷಯ ಸಂಗ್ರಹಿಸಿ, ಸರಳವಾಗಿ ಉದಾಹರಣೆಗಳೊಂದಿಗೆ ವಿವೇಚಿಸಿದುದು ಈ ಕೃತಿಯ ವೈಶಿಷ್ಟ್ಯವಾಗಿದೆ.

ಡಾ. ರಾಧಾಕೃಷ್ಣನ್‌ರು ಭಾರತೀಯ ಹಾಗೂ ಪಾಶ್ಚಿಮಾತ್ಯ ಮಾನವಕುಲಕ್ಕೆ ಸೇತುವೆಯಾಗಿ ನಿಂತು ಚೇತನಶಕ್ತಿ ನೀಡಬಲ್ಲರೆಂಬುದನ್ನು ಎತ್ತಿ ತೋರಿಸಿದ್ದಾರೆ. ಒಟ್ಟಿನಲ್ಲಿ ಈ ಗ್ರಂಥ ಓದುಗರನ್ನು ಸುಮಾರ್ಗದತ್ತ ಕರೆದೊಯ್ಯುವಲ್ಲಿ ಸಹಕಾರಿಯಾಗುವುದರಲ್ಲಿ ಸಂದೇಹವಿಲ್ಲ.

ಪ್ರೊ. ಸಿದ್ಧಣ್ಣ ಲಂಗೋಟಿಯವರಿಂದ ಇಂಥ ಅನೇಕ ಮಹಾತ್ಮರ ಜೀವನ ಚರಿತ್ರೆ ಕುರಿತು ಗ್ರಂಥಗಳು ಇನ್ನೂ ರಚನೆಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ ಡಾ. ವಿಲ್ಯಂ ಮಾಡ್ತ
ಧಾರವಾಡ -೩ ಚೇರಮನ್, ಕನ್ನಡ ಅಧ್ಯಯನ ಪೀಠ

೨

(ಪ್ರೊ. ಸಿದ್ದಣ್ಣ ಲಂಗೋಟಿ(ಚಾಂದಕವಠೆ) ವಿರಚಿತ 'ವಿಶ್ವವಿಖ್ಯಾತ ತತ್ವಜ್ಞಾನಿ ಡಾ. ರಾಧಾಕೃಷ್ಣನ್‌ರು' ಎಂಬ ಪುಸ್ಕಕವನ್ನು ವಿಶೇಷ ಆಸಕ್ತಿಯಿಂದ ಓದಿದೆ; ಆನಂದ ಅಭಿಮಾನಗಳು ಉಕ್ಕಿ ಬಂದವು.

ಡಾ. ರಾಧಾಕೃಷ್ಣನ್‌ರ ಜನ್ಮಶತಾಬ್ದಿ ಸಂದರ್ಭದಲ್ಲಿ ಈ ಪುಸ್ತಕವನ್ನು ಪ್ರಕಟಿಸಿದ್ದು ಅತ್ಯಂತ ವೈಶಿಷ್ಟ್ಯಪೂರ್ಣವಾಗಿದೆ. ಇಲ್ಲಿ ಎತ್ತಿ ತೋರಿಸಿದ ಡಾ. ರಾಧಾಕೃಷ್ಣನ್‌ರ ಚರಿತ್ರಾಂಶಗಳು ಆಧಾರಯುತವಾಗಿದ್ದು ಸ್ಫೂರ್ತಿದಾಯಕವಾಗಿವೆ. ಅವುಗಳ ನಿರೂಪಣಾ ಶೈಲಿಯಂತೂ ಎಂಥ ಭಾರತೀಯನನ್ನೂ ರಾಷ್ಟ್ರಾಭಿಮಾನ ತಾಳಲು ಬಡಿದೆಬ್ಬಿಸುವಂತಿವೆ! ಶಿಕ್ಷಕರಿಗಂತೂ ಹೇಳಲೇಬೇಕಾಗಿಲ್ಲ!'

ಪ್ರೊ. ಸಿದ್ದಣ್ಣನವರು ವಿಜ್ಞಾನ ಪದವಿಧರರಿದ್ದರೂ ತತ್ವಜ್ಞಾನದಲ್ಲಿ ಸ್ನಾತಕೋತ್ತರ ಪದವಿಗಳನ್ನು ಉಚ್ಚ ಶ್ರೇಣಿಯಲ್ಲಿ ಪಡೆದವರಾಗಿರುವರು. ತತ್ವಜ್ಞಾನಿ ಮಹಾನುಭಾವರು ಮಾನವ ಜೀವನವನ್ನು ಸುಸಂಸ್ಕೃತವನ್ನಾಗಿ ಮಾಡಿ ಅದನ್ನು ಉಚ್ಚಮಟ್ಟಕ್ಕೆ ಒಯ್ಯಲು ತಮ್ಮ ಪ್ರಭಾವವನ್ನು ಬೀರುವರು' ಎಂಬುದರಲ್ಲಿ ಅವರಿಗೆ ದೃಢ ನಂಬಿಕೆ ಇದೆ; ಜೊತೆಗೆ ಸಾಧನವೂ ಇದೆ. ಅಲ್ಲದೆ ಅಂಥ ಯೋಗ್ಯ ಮಹಾನುಭಾವರನ್ನು ಆಯ್ದುಕೊಂಡು ಅವರ ವ್ಯಕ್ತಿತ್ವವನ್ನು ಸೂಕ್ತ ರೀತಿಯಲ್ಲಿ ಶಕ್ತಿಯುತವಾಗಿ ಪುಸ್ತಕ ರೂಪದಲ್ಲಿ ನಿರೂಪಿಸತಕ್ಕ ಪ್ರತಿಭೆಯನ್ನು ಪಡೆದಿದ್ದಾರೆ. ಪ್ರೊ. ಸಿದ್ಧಣ್ಣನವರು. ಜೊತೆಗೆ, ಗುರು ಹಿರಿಯರನ್ನು ಗೌರವಾದರಗಳಿಂದ ಕಾಣುವ ಅವರ ಸದ್ಗುಣವು ಬಂಗಾರಕ್ಕೆ ಕುಂದಣವಿಟ್ಟಂತಿದೆ.

ಇದು ಸಿದ್ದಣ್ಣನವರ ಕೃತಿಗಳನ್ನು ಓದಿದವರಿಗೆ, ಇಲ್ಲವೇ ಅವರನ್ನು ಪ್ರತ್ಯಕ್ಷ ಸಂಪರ್ಕಿಸಿದವರಿಗೆ ಗೊತ್ತಾಗದೇ ಇರದು. ಅವರ ಎಲ್ಲ ಕೃತಿಗಳು ಓದುಗರ ಮೆಚ್ಚುಗೆಯನ್ನು ಪಡೆದಿವೆ. ಇಂಥ ಕೃತಿಗಳು ಪ್ರೊ. ಸಿದ್ದಣ್ಣನವರಿಂದ ಇನ್ನಷ್ಟು ಹೆಚ್ಚೆಚ್ಚು ರಚಿಸಲ್ಪಡಲೆಂದು ಹೃತ್ಪೂರ್ವಕವಾಗಿ ಹಾರೈಸುವೆ.

ಎನ್. ವ್ಹಿ. ಘೊಬ್ಬಿ ನಿವೃತ್ತ
ಉಪನಿರ್ದೇಶಕರು,

೩

'ಡಾ ರಾಧಾಕೃಷ್ಣನ್‌ರನ್ನು ಕುರಿತು ನೀವು ಬರೆದಿರುವ ಈ ಹೊಸ ಹೊತ್ತಿಗೆ ಸ್ವಾಗತಾರ್ಹವಾದುದು. ಆ ಮಹಾಚೇತನದ ಜೀವನ ಸಾಧನೆ-ವಿಚಾರಗಳನ್ನು ಇಷ್ಟೊಂದು ಅಡಕವಾಗಿ, ಇಷ್ಟೊಂದು ಹೃದಯಂಗಮವಾಗಿ ಸಂಗ್ರಹಿಸಿರುವುದು ನಿಮ್ಮ ನುರಿತ ಲೇಖನಿಗೆ ಸಾಧ್ಯವಾಗಿದೆ. ಅಭಿನಂದನೆಗಳು.

ಡಾ. ಸಿದ್ಧಯ್ಯ ಪುರಾಣಿಕ, ಬೆಂಗಳೂರು -೫೨

೪

ಡಾ. ರಾಧಾಕೃಷ್ಣನ್‌ರ ಜನ್ಮ ಶತಮಾನೋತ್ಸವ ಸಂದರ್ಭದಲ್ಲಿ ಹೊರ ಬಂದ ಈ ಗ್ರಂಥವು ಸಮರ್ಪಕವೂ ವೈಶಿಷ್ಟ್ಯಪೂರ್ಣವೂ ಆಗಿದೆ. ವೈಜ್ಞಾನಿಕವಾಗಿ ನೋಡುವ, ವಿಶ್ಲೇಷಿಸುವ, ನಿರೂಪಿಸುವ ಸಾಮರ್ಥ್ಯ ಇವರಲ್ಲಿ ಸಹಜ ಹಾಗೂ ಸ್ವಾಭಾವಿಕವಾಗಿ ಬೆಳೆದು ಬಂದಿದೆ.

**ಎಸ್. ಬಿ. ಹಳಕಟ್ಟಿ**, ನಿ. ಶಿಕ್ಷಣಾಧಿಕಾರಿಗಳು, ಧಾರವಾಡ

೫

ಪ್ರೊ. ಸಿದ್ದಣ್ಣ ಲಂಗೋಟಿಯವರು ವಿಶ್ವವಿಖ್ಯಾತ ತತ್ವಜ್ಞಾನಿ ಡಾ. ಸರ್ವಪಲ್ಲಿ ರಾಧಾಕೃಷ್ಣನ್‌ರ ಕೃತಿಗಳು, ಅನುವಾದಿತ ಗ್ರಂಥಗಳು, ಲೇಖನಗಳು, ಸಂಪಾದಿತ ಕೃತಿಗಳು ಹಾಗೂ ಇತರ ಕೃತಿಗಳು ಅಧಾರದಿಂದ, ಅವರ ಜೀವನ ಸಾಧನೆ ವಿಚಾರಗಳನ್ನು ಆಧಾರಯುತವಾಗಿ, ಅಧಿಕಾರವಾಣಿಯಿಂದ ನಿರೂಪಿಸಿದ್ದಾರೆ.

**ಡಾ. ಎಂ. ಎಸ್. ಹುಲ್ಲೊಳ್ಳಿ**, (ಸಂಯುಕ್ತ ಕರ್ನಾಟಕ ವಿಮರ್ಶೆ)

೬

ಡಾ. ರಾಧಾಕೃಷ್ಣನ್ ಅವರ ಜೀವನ, ಸಾಧನೆ ಹಾಗೂ ತತ್ವಜ್ಞಾನಗಳ ಕುರಿತಾಗಿ ತಿಳಿಯಾದ ಭಾಷೆಯಲ್ಲಿ ತಿಳಿಸಿ ಹೇಳುವ ನಿಮ್ಮ ಶೈಲಿ ಮನಂಬುಗುವಂತಿದೆ. ಅವರ ಹಾಗೂ ಅವರ ವಿಚಾರಗಳ ಬಗ್ಗೆ ವಿವಿಧ ವಿದ್ವಾಂಸರ ಅಭಿಪ್ರಾಯಗಳನ್ನೂ ಮೂಲ ಅವತರಣಿಕೆಗಳ ಮೂಲಕವೇ ಕ್ರೋಢಿಕರಿಸುವ ಪ್ರಯತ್ನ ಶ್ಲಾಘನೀಯ. ರಾಧಾಕೃಷ್ಣನ್ ಅವರ ಶೈಕ್ಷಣಿಕ ವಿಚಾರಗಳ ಪ್ರಕರಣವಂತೂ ನನಗೆ ತುಂಬ ಹಿಡಿಸಿತು. ಇಂಥ ಉಪಯುಕ್ತ ಕೃತಿಯನ್ನು ಕನ್ನಡಿಗರ ಕೈಗಿತ್ತ ನಿಮ್ಮ ಲೇಖನಿಯಿಂದ ಇಂಥ ಇನ್ನೂ ಅನೇಕ ಕೃತಿಗಳು ಮೂಡಿ ಬರಲಿ.

**ಬಿ. ಎ. ಸನದಿ,** ಮುಂಬಯಿ

೭

I have gone through your book Dr. Radhakrishnan, Really it contains valuable information and thought provoking ideas, I really impressed by your intense desire to shape and mould the ideas and attitides of teacher and students according to the ideas upheld by the great thinkers. Your book provides immense help to teachers and students your painstaking efforts to spread moral and human values in this era of degenerated values is noteworthy.

Dr. Bonald has said that' a writer must throw light on contemporary Social problem's so you have proved this.

**Prof. Rajashree B. Agasar,** Muddabihal

೮

ಡಾ. ಸರ್ವಪಲ್ಲಿ ರಾಧಾಕೃಷ್ಣನ್‌ರ ಜೀವನ-ಸಾಧನೆ-ವಿಚಾರಗಳನ್ನು ಕುರಿತು ಸಕಾಲದಲ್ಲಿ ಹೊರ ತಂದಿರುವ ನಿಮ್ಮ ಈ ಪುಸ್ತಕವು ಆದರ್ಶ ಶಿಕ್ಷಕನಾಗಿ

ರೂಪುಗೊಳ್ಳಬೇಕೆಂದು ಹಂಬಲಿಸುವ ಪ್ರತಿಯೊಬ್ಬ ಶಿಕ್ಷಕನಿಗೂ ಬೇಕಾದ ಸ್ಫೂರ್ತಿಯನ್ನು ನೀಡಬಲ್ಲುದು.

ಸ್ವಸಾಮರ್ಥ್ಯ, ಸ್ವಪ್ರತಿಭೆ, ಪ್ರಾಮಾಣಿಕ ಪ್ರಯತ್ನಗಳಿಂದ ಆದರ್ಶ ವಿದ್ಯಾರ್ಥಿಯಾಗಿ, ಶಿಕ್ಷಕರಾಗಿ ಶಿಕ್ಷಣ ತಜ್ಞರಾಗಿ, ಉಪಕುಲಪತಿಗಳಾಗಿ, ರಾಯಭಾರಿಗಳಾಗಿ, ಭಾರತೀಯ ಸಂಸ್ಕೃತಿ-ಧರ್ಮ-ದರ್ಶನಗಳ ಪ್ರತಿನಿಧಿಗಳಾಗಿ ಅತ್ಯಮೂಲ್ಯ ಬೃಹತ್ ಗ್ರಂಥಗಳ ಕರ್ತೃಗಳಾಗಿ ಹಾಗೂ ಶಾಂತಿದೂತರಾಗಿ ನಮ್ಮ ರಾಷ್ಟ್ರಕ್ಕೆ ತನ್ಮೂಲಕ ವಿಶ್ವಕ್ಕೆ ಅಪೂರ್ವ ಸೇವೆ ಸಲ್ಲಿಸಿರುವ ಡಾ. ಸರ್ವಪಲ್ಲಿ ರಾಧಾಕೃಷ್ಣನ್‌ರ ಅಮರ ಚೇತನವನ್ನು ಸಕಾಲದಲ್ಲಿ ನಿಮ್ಮ ಪುಸ್ತಕವು ಅಲಂಕರಿಸಿದೆ. ನಿಮ್ಮನ್ನು ನಾನು ಮನಸಾರೆ ಅಭಿನಂದಿಸುವೆ.

**ಪ್ರೊ. ಜಿ. ಎನ್. ರೇಚಣ್ಣ**, ತತ್ವಶಾಸ್ತ್ರ ವಿಭಾಗ
ಕರ್ನಾಟಕ ಕಾಲೇಜು, ಧಾರವಾಡ

೯

ಡಾ. ಸರ್ವಪಲ್ಲಿ ರಾಧಾಕೃಷ್ಣನ್ ಗ್ರಂಥ'ವನ್ನು ಅತ್ಯಂತ ಅದರಾಭಿಮಾನಗಳೊಂದಿಗೆ ಕೈಗೆತ್ತಿಕೊಂಡು ನಮಿಸಿ ಪುಟಗಳನ್ನು ತೆರೆದೆ. ಅತ್ಯಂತ ಆನಂದವಾಯಿತು.

ಡಾ. ರಾಧಾಕೃಷ್ಣನ್ ಅವರು ಭಾರತಮಾತೆಯ ಸುಪುತ್ರರಾಗಿ ಜನಿಸಿ ಬಂದು ವಿಶ್ವಮಾತೆಯ ಮುಕುಟ ಮಣಿಯಾಗಿ, ತಮ್ಮ ತತ್ವಚಿಂತನೆ ಪರಿಶುದ್ಧತೆಗಳಿಂದ ಸಮರ್ಪಣ ಮನೋಬಾವಗಳಿಂದ ಎಂದೆಂದಿಗೂ ಬೆಳಕನ್ನು ಬೀರುವವರು ಎಂಬುದನ್ನು ತಮ್ಮ ಕೃತಿ ಅಭಿವ್ಯಕ್ತಗೊಳಿಸಿದೆ.

ಇಂಥ ಮಹಾನ್ ದೈವೀ ಪುರುಷನ ಜನ್ಮ ಶತಮಾನ ಉತ್ಸವವನ್ನು ವಿಶ್ವದಾದ್ಯಂತ ಆಚರಿಸುವ ಸುಯೋಗವನ್ನು ಕಳೆದುಕೊಂಡ ಇಂದಿನ ಭಾರತದ ಅಪ್ರಬುದ್ಧ ರಾಜಕಾರಣಿಗಳನ್ನು ಇತಿಹಾಸವೇ ಶಪಿಸಬಹುದಾಗಿದೆ !

ಡಾ. ರಾಧಾಕೃಷ್ಣನ್ ಅವರ ಸಮಗ್ರ ಜೀವನವನ್ನು ಆಸಕ್ತಿ ಅಭಿರುಚಿ ಅಭಿಮಾನಗಳಿಂದ ಅವರ ಗ್ರಂಥಗಳಿಂದ ಆರೈದು, ಅನುಭವಿಸಿ, ಧನ್ಯತೆಯಿಂದ ನಾಡಿನ ಶಿಕ್ಷಕ ಲೋಕಕ್ಕೆ, ಪ್ರಾಜ್ಞರಿಗೆ ತಾವು ಸ್ವಾರಸ್ಯವಾಗಿ ಹೃದಯಂಗಮವಾಗಿ ಪರಿಚಯಿಸುವಲ್ಲಿ ಯಶಸ್ವಿಯಾಗಿದ್ದೀರಿ; ಸಾರ್ಥಕತೆಯನ್ನು ಸಹಜವಾಗಿ ಪಡೆದಿದ್ದೀರಿ. ಶೈಲಿ ನಿರೂಪಣೆ ಆಕರ್ಷಕವಾಗಿದೆ, ತಾನಾಗಿಯೇ ಓದಿಸಿಕೊಂಡು ಹೋಗಬಲ್ಲ ಅಭಿವ್ಯಕ್ತಿ ಲೇಖಕನ ಪಕ್ವತೆಯ ದ್ಯೋತಕವಲ್ಲವೇ ?

- **ಈಶ್ವರಚಂದ್ರ ಚಿಂತಾಮಣಿ**, ವಿಜಾಪುರ
ರಾಷ್ಟ್ರ ಪ್ರಶಸ್ತಿ ವಿಜೇತ ಶಿಕ್ಷಕರು

೧೦

'ಡಾ. ರಾಧಾಕೃಷ್ಣನ್‌ರು' ಕೃತಿಯ ಅಂದವಾದ ಮುಖಪುಟ ತೆರೆದು ಬರಿ ಕಣ್ಣು ಹಾಯಿಸುತ್ತಿದ್ದವಳು ಅರಿವಿಲ್ಲದಂತೆ ವಿವರವಾಗಿ ಓದುವುದರಲ್ಲಿ ಮಗ್ನಳಾಗಿ ಮುಗಿಸಿಯೇ ಕೆಳಗಿಟ್ಟೆ. ಲಕ್ಷ್ಯ ಕೇಂದ್ರೀಕರಿಸುವ ತಮ್ಮ ಬರಹ ಶೈಲಿಯ ಶಕ್ತಿ ಕಂಡು ಅಭಿಮಾನ, ಆಶ್ಚರ್ಯಪಟ್ಟೆ, ಆನಂದಪಟ್ಟೆ.

ಡಾ. ರಾಧಾಕೃಷ್ಣನ್‌ರು ತಮ್ಮ ಹಲವಾರು ಕೃತಿಗಳಲ್ಲಿ ಧರ್ಮ, ರಾಜಕೀಯ, ಶಿಕ್ಷಣ, ತತ್ವಜ್ಞಾನ ಮುಂತಾದ ವಿಷಯಗಳ ಕುರಿತಾಗಿ ವ್ಯಕ್ತಪಡಿಸಿದ ವಿಚಾರಗಳನ್ನೆಲ್ಲ ತಾವು ಶ್ರೀಕೃಷ್ಣ ಬ್ರಹ್ಮಾಂಡವನ್ನು ತನ್ನ ನಾಲಗೆಯ ಮೇಲೆ ತೋರಿಸಿದಂತೆ ಎಷ್ಟು ಚೆನ್ನಾಗಿ ಪುಟ್ಟ ಗ್ರಂಥದಲ್ಲಿ ಸಂಗ್ರಹಿಸಿದ್ದೀರಿ, ಆಂಗ್ಲ ಲೇಖಕ ಶೇಕ್ಸಪೀಯರನ (ಸಂಕ್ಷಿಪ್ತತೆ ಜಾಣತನದ ಆತ್ಮ) ಎಂಬ ವಾಣಿಯನ್ನು ನಿಜಗೊಳಿಸಿದ್ದೀರಿ ! ಮನದುಂಬಿದ ಅಭಿನಂದನೆಗಳು.

ಶಿಕ್ಷಣ ಕುರಿತಾದ ಡಾ. ರಾಧಾಕೃಷ್ಣನ್‌ರ ಅತ್ಯಮೂಲ್ಯ ವಿಚಾರ ಮುತ್ತುಗಳನ್ನೆಲ್ಲ ಅವರ ಸಮಗ್ರ ಶೈಕ್ಷಣಿಕ ವಿಚಾರಗಳ ಸಾಗರದಾಳಕ್ಕಿಳಿದು ಹೆಕ್ಕಿ ತಂದು, ಕೃತಿ ತುಂಬ, ಹರಡಿ ನಮ್ಮ ಉಡಿಗೆ ಸುರಿದ ತಮ್ಮ ಉಪಕಾರವನ್ನು ಅದೆಷ್ಟು ಅದ್ಹೇಗೆ (ಶಿಕ್ಷಕರಾದವರು ವಿಶೇಷವಾಗಿ) ಅಭಿನಂದಿಸಿದರೂ ಸಾಲದು.

ನಿಜವಾಗಿಯೂ ಮಹಾನ್ ತತ್ವವೇತ್ತರೊಬ್ಬರ ಇಂಥ ಗ್ರಂಥ ಸಮಗ್ರ ವಿಚಾರಧಾರೆಗಳನ್ನೊಳಗೊಂಡ ಕೃತಿಯು ಕನ್ನಡ ಸಾಹಿತ್ಯದಲ್ಲಿನ ಒಂದು ಕೊರತೆಯ ಒರತೆಯನ್ನೇ ತುಂಬಿದ್ದೀರಿ. ಅತ್ಯವಶ್ಯ 'ಬೇಡಿಕೆ'ಯೊಂದಕ್ಕೆ ತಮ್ಮ ಕೃತಿ ತಕ್ಕ 'ನೀಡಿಕೆ'ಯಾಗಿದೆ.

ಬೆಳಗಾವಿ **ಪ್ರೊ. ಗುರುದೇವಿ ಹುಲೆಪ್ಪನವರಮಠ**

ಇಂಗ್ಲೀಷ ಪ್ರಾಧ್ಯಾಪಕರು

೧೨

ಡಾ|| ರಾಧಾಕೃಷ್ಣನ್ ಗ್ರಂಥ ಅತ್ಯುತ್ಸಾಹದಿಂದ ಓದಿದೆ. ಸದಾ ಶಿಕ್ಷಣದ ಬಗ್ಗೆ ಚಿಂತಿಸುತ್ತಿರುವ ನನಗೆ ಮಹದಾನಂದವಾಯಿತು. ಜೀವ ಶವದಂತಿರುವ ಸಮಾಜಕ್ಕೆ ನಿಮ್ಮ ಗ್ರಂಥ ನಿಜಕ್ಕೂ ಸಂಜೀವಿನಿ ಇದ್ದಂತೆ.

**ಶ್ರೀ ಶಿವಾನಂದ ಗುರೂಜಿ**

ಸಂಸ್ಥಾಪಕರು, ಬಸವಗುರುಕುಲ, ಕುಂಬಳೂರು

೧೩

ಡಾ.|| ರಾಧಾಕೃಷ್ಣನ್‌ರು ಬಹುಮುಖ ವ್ಯಕ್ತಿತ್ವನ್ನು ತುಂಬಾ ಚೆನ್ನಾಗಿ ನಿರೂಪಿಸಿದ್ದೀರಿ. ಅವರ ಕುರಿತು ಈ ತರಹದ ಪುಸ್ತಕಗಳು ಇರಲಿಲ್ಲ. ಈ ಅವಶ್ಯಕತೆಯನ್ನು ನೀವು ಪೂರೈಸಿದ್ದೀರಿ. ಇನ್ನೂ ಇಂತಹ ಅನೇಕ ಪುಸ್ತಕಗಳು ನಿಮ್ಮಿಂದ ಹೊರಬರಲಿ.

**-ಜಗದ್ಗುರು ಶ್ರೀ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು**

ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ ಗದಗ-ಡಂಬಳ

# ಪ್ರೊ. ಸಿದ್ಧಣ್ಣ ಲಂಗೋಟಿ ಅವರ ಕೃತಿಗಳು

೧. ಅಲ್ಲಮಪ್ರಭುದೇವರ ಜೀವನ ಸಂದೇಶ ೧೯೭೯
೨. ಅಕ್ಕಮಹಾದೇವಿಯ ಜೀವನ ದರ್ಶನ ೧೯೭೯
೩. ಲಿಂಗಾಯತ ಧರ್ಮ ಸಮಾಜ ತತ್ವಜ್ಞಾನ ೧೯೭೯
೪. ಲಿಂಗಾಯತ ಧರ್ಮದ ಮೂಲತತ್ವಗಳು ೧೯೭೯
೫. ಶಿವಯೋಗಿಣಿ ಅಕ್ಕನಾಗಮ್ಮ (ಸಂಪಾದಿತ) ೧೯೭೯
೬. ಗಣನಾಯಕ ಮಡಿವಾಳ ಮಾಚಿದೇವರು ೧೯೭೯
೭. ಮರಣವೇ ಮಹಾನವಮಿ ೧೯೮೦
೮. ಷಟಸ್ಥಲ ಚಕ್ರವರ್ತಿ ಚೆನ್ನಬಸವಣ್ಣನವರು ೧೯೭೯
೮. ಬಸವಬೆಳಗು (ಸಂಪಾದಿತ) ೧೯೮೦
೧೦. ಪ್ರಭುವಿನ ವಾಣಿಯಲ್ಲಿ ಬಸವಣ್ಣನವರು ೧೯೮೦
೧೧. ವಚನ ಸಂಶೋದನ ಪಿತಾಮಹ ಫ.ಗು.ಹಳಕಟ್ಟಿಯವರು ೧೯೮೦
೧೨. ಬಸವಣ್ಣನವರ ಬಯ್ಗುಳಗಳು ೧೯೮೧
೧೩. ಅಕ್ಕ ಕಂಡ ಅಣ್ಣ ೧೯೮೧
೧೪. ಅಂಬಿಗರ ಚೌಡಯ್ಯ ೧೯೮೧
೧೫. ಶರಣರ ಶಿವರಾತ್ರಿ ೧೯೮೨
೧೬. ಸ್ವಾಮಿ ವಿವೇಕಾನಂದರ ದೇಶಭಕ್ತಿ ಕಲ್ಪನೆ ೧೯೮೨
೧೭. ಬಸವಾದಿ ಶರಣರ ವಚನಾಮೃತ (ಸಂಪಾದಿತ) ೧೯೮೩
೧೮. ವಿಭೂತಿ ನಿರ್ಮಾಣ ವಿಧಾನ ೧೯೮೪
೧೯. ಬಾಚಿಕಾಯಕದ ಬಸವಪ್ಪ -ಕಾಳವ್ವೆ ೧೯೮೪
೨೦. ಶರಣರು ಹಾಗೂ ಮೂಢನಂಬಿಕೆಗಳು ೧೯೮೪
೨೧. ಇಷ್ಟಲಿಂಗ ನಿರ್ಮಾಣ ವಿಧಾನ ೧೯೮೫
೨೨. ಹಡಪದ ಅಪ್ಪಣ್ಣ -ಲಿಂಗಮ್ಮ ೧೯೮೫
೨೩. ಶ್ರೀ ಗುರುಸಿದ್ಧಪ್ರಭುದೇವರು ೧೯೮೫
೨೪. ಇಷ್ಟಲಿಂಗ ಪೂಜಾವಿಧಾನ ೧೯೮೫
೨೫. ಫಕ್ಕೀರಪ್ಪ ಮುರಗೋಡ ಮಾಸ್ತರು ೧೯೮೫

೫೩. ಜಗಜ್ಯೋತಿ ಬಸವೇಶ್ವರ ಅಂಕಿತದ ಸಿಲಂ ವಚನಗಳು ೨೦೦೦

೫೪. ಬಂಥನಾಳ ಸಂಗನಬಸವ ಶಿವಯೋಗಿಗಳು ೨೦೦೦

೫೫. ಕಲ್ಯಾಣ ನಾಡಿನ ಶರಣಪರಿಷತ್ತು ನಡೆದು ಬಂದ ದಾರಿ ೨೦೦೧

೫೬. ಶರಣ ಕುಮಾರ ಕಕ್ಕಯ್ಯ ೨೦೦೧

೫೭. ಬಸವ ಬೆಳೆ ೨೦೦೨

೫೮. ಶಿವಯೋಗಿ ವೇಮನರ ವಚನಗಳು (ಸಂ) ೨೦೦೩

೫೯. ಕನ್ನಡ ಕವಿ-ಕಾವ್ಯ-ಪರಂಪರೆ (ಸಂ) ೨೦೦೪

೬೦. ದರ್ಪಣ-ಸ್ಮರಣಸಂಚಿಕೆ (ಸಂ) ೨೦೦೪

೬೧. ಲಿಂಗಾಯತ ಧರ್ಮ-ದರ್ಶನ ೨೦೦೫

೬೨. ಕಾಯಕ ಸಂಜೀವನಿ ಅಭಿನಂದನ ಗ್ರಂಥ (ಸಂ) ೨೦೦೬

೬೩. ಬಸವಣ್ಣನವರು ೨೦೦೭

೬೪ *ನೆನಹು ಕರ್ಕಿ ಹಾಗೂ ಸಣಕಲ್ಲರ ಸ್ಮರಣ ಸಂಪುಟ(ಸಂ)* ೨೦೦೮

೬೫. *ಡಾ. ಡಿ.ಎಸ್.ಕರ್ಕಿ* ೨೦೦೮

೬೬ *ಬಸವ ಜ್ಯೋತಿ ಮಹಾಂತ ಶಿವಯೋಗಿಗಳು* ೨೦೧೧

೬೭ *ಪರಮದಾಸೋಹಿ ವಿಜಯ ಮಹಾಂತ ಶಿವಯೋಗಿಗಳು* ೨೦೧೨

೬೮ *ವಚನ ಶ್ರಾವಣ* ೨೦೧೩

೬೯ *ಬಸವಾನುಭಾವಿ (ಗೌರವ ಗ್ರಂಥ) (ಸಂ)* ೨೦೧೩

**********



ಪ್ರೊ. ಸಿದ್ಧಣ್ಣ ಲಂಗೋಟಿ ಅವರು ಬಸವಭೂಮಿಯಾದ ವಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನ ಚಾಂದಕವಠೆ ಗ್ರಾಮದ ಲಿಂಗಾಯತ ಕೃಷಿ ಕುಟುಂಬದಲ್ಲಿ ಜನಿಸಿ (೧೯೫೧). ಚಾಂದಕವಠೆ, ಕನ್ನೊಳ್ಳಿ ಗ್ರಾಮಗಳಲ್ಲಿ ಪ್ರಾಥಮಿಕ ಶಿಕ್ಷಣ, ಸಿಂದಗಿಯಲ್ಲಿ ಹೈಸ್ಕೂಲು ಶಿಕ್ಷಣ, ವಿಜಾಪುರದಲ್ಲಿ ಬಿ.ಎಸ್.ಸಿ. ಪದವಿ ಶಿಕ್ಷಣ, ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯದಿಂದ ಎಂ.ಎ. ತತ್ವಜ್ಞಾನ, ಎಂ.ಎ. ಹಿಂದಿ, ಎಂ.ಎ. ಕನ್ನಡ, ಎಲ್.ಎಲ್‌ಬಿ. ಕಾನೂನು ಶಿಕ್ಷಣ, ಸಿ ವಾಯ್, ಇಡಿ ಯೋಗ ಶಿಕ್ಷಣ ಪಡೆದವರಾಗಿದ್ದಾರೆ.

ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಲೇ, ಸಾಹಿತ್ಯ ಕೃಷಿಕೈಕೊಂಡಿದ್ದಾರೆ. ಭಾರತೀಯ ಹಾಗೂ ಪಾಶ್ಚಿಮಾತ್ಯ ತತ್ವಜ್ಞಾನ ಚಿಂತಕರೂ, ಬಸವತತ್ವಜ್ಞಾನದ ಅನುಭಾವಿ ಲೇಖಕರೂ ಆಗಿರುವ ಸಿದ್ಧಣ್ಣ ಲಂಗೋಟಿಯವರು ೬೯ ಕ್ಕೂ ಮಿಕ್ಕಿ ಗ್ರಂಥಗಳ ರಚನೆ ಹಾಗೂ ಸಂಪಾದನೆ ಮಾಡಿದ್ದಾರೆ.

ಕ್ರಿ.ಶ. ೧೯೯೦ ರಲ್ಲಿ ಹಾಗೂ ಕ್ರಿ.ಶ. ೨೦೦೦ ಇಸ್ವಿಯಲ್ಲಿ ಪಾಶ್ಚಿಮಾತ್ಯ ಹಾಗೂ ಪ್ರಪಂಚದ ಪ್ರಮುಖ ದೇಶಗಳಾದ ಇಂಗ್ಲಂಡ, ಅಮೇರಿಕಾ, ಪ್ರಾನ್ಸ್, ಇಟಲಿ, ಜರ್ಮನಿ, ಕೆನಡಾ, ಆಸ್ಟ್ರಿಯಾ, ಹಾಲಂಡ, ಸಿಂಗಾಪುರ, ಅರಬ ರಾಷ್ಟ್ರಗಳ ಪ್ರವಾಸ ಕೈಕೊಂಡು ಬಸವತತ್ವಜ್ಞಾನ ಕುರಿತು ಉಪನ್ಯಾಸ ನೀಡಿ, ತತ್ವ ಪ್ರಸಾರಗೈದು ಬಂದಿದ್ದಾರೆ.

೧೯೭೭ ರಲ್ಲಿ ಬಸವತತ್ವ ಪ್ರಸಾರ ಸಂಸ್ಥೆ ಸ್ಥಾಪಿಸಿ ಶರಣ ಫ.ಗು. ಹಳಕಟ್ಟಿಯವರ ಶಿವಾನುಭವ ಪತ್ರಿಕೆಗೆ ಮರುಜನ್ಮ ನೀಡಿದ್ದಾರೆ. ೧೯೮೩ ರಲ್ಲಿ ಹರ್ಡೇಕರ ಮಂಜಪ್ಪನವರ ಶತಮಾನೋತ್ಸವ ಆಚರಿಸಿ 'ಶರಣಸಂದೇಶ'ವನ್ನು 'ಬಸವಬೆಳಗು' ಹೆಸರಿನಲ್ಲಿ ಮರುಹುಟ್ಟಿಗೆ ಕಾರಣೀಕರ್ತರಾಗಿದ್ದಾರೆ. ೧೯೯೦ ರಲ್ಲಿ ಇಂಗ್ಲೆಂಡಿನಲ್ಲಿ 'ಬಸವ ಇಂಟರನ್ಯಾಶನಲ್ ಫೌಂಡೇಶನ್' ಪ್ರಾರಂಭಿಸಿ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ್ದಾರೆ. ಇಳಕಲ್ಲ ಶರಣ ಸಿದ್ಧಾಂತ ವಿದ್ಯಾಪೀಠದ ಸಂಚಾಲಕರಾಗಿ ೩೫ ವರುಷಗಳಿಂದ ಶಿವಾನುಭವ ಶಿಬಿರಗಳನ್ನು ಸಂಘಟಿಸಿದ್ದಾರೆ. ಸಾವಿರಾರು ವಚನಗಳನ್ನು ಬರೆದು ಆಧುನಿಕ ವಚನಕಾರರಲ್ಲಿ ಒಬ್ಬರಾಗಿದ್ದಾರೆ.

ಗದಗ-ಬೆಟಗೇರಿ

–ಅಂಬಿಗರ ಕುಮಾರಚೌಡಯ್ಯ
ಆಧುನಿಕ ವಚನಕಾರರು